# ಭಯ, ಸ್ವಾತಂತ್ರ್ಯ ಮತ್ತು ಶಿಕ್ಷಣ



ಜೆ. ಕೃಷ್ಣಮೂರ್ತಿ

ಜೆ. ಕೃಷ್ಣಮೂರ್ತಿ

# ಭಯ, ಸ್ವಾತಂತ್ರ್ಯ, ಶಿಕ್ಷಣ

(ಲೈಫ್ ಅಹೆಡ್ ಪುಸ್ತಕದ ಆಯ್ದ ಭಾಗಗಳು)

ಕನ್ನಡ ನಿರೂಪಣೆ

ಓ.ಎಲ್. ನಾಗಭೂಷಣ ಸ್ವಾಮಿ

೨೦೦೨

ಬೆಂಗಳೂರು ಅಧ್ಯಯನ ಕೇಂದ್ರ

ಕೃಷ್ಣಮೂರ್ತಿ ಫೌಂಡೇಶನ್, ಇಂಡಿಯ



Bhaya, Svatantrya, Sikshana: Kannada translation of selected chapters, (1-4) from J. Krishnamurti's book : *Life Ahead.*
Second Edition, 2000
First edition published in 1987 by
Krishnamurti Foundation of America,
Ojai, Califonia.
Translated by
O.L. Nagabhushana Swamy.


Vasant Vihar 64-65, Greenways Road
Chennai-600 028
E-mail : kfihq@md2.vsnl.net.in

Price : Rs. 20/-

Kannada Translation published by
Bangalore Study Centre
Krishnamurti Foundation, India, 2002.



Printed by : OMKAR OFFSET PRINTERS
No. 3/3, New Tharagupet Bangalore - 02 Ph : 6708186, 6709026
E-mail : omkar@blr.vsnl.net.in Website : www.omkarprinters.com

# ಶಿಕ್ಷಣದ ಕಾರ್ಯವೇನು?

ನೀವು ಶಿಕ್ಷಣವನ್ನು ಏಕೆ ಪಡೆಯುತ್ತಿದ್ದೀರಿ, ಚರಿತ್ರೆ, ಗಣಿತ, ಭೂಗೋಳ, ಇತ್ಯಾದಿಗಳನ್ನೆಲ್ಲ ಏಕೆ ಓದುತ್ತಿದ್ದೀರಿ, ಶಾಲೆಗೆ ಹೋಗುವುದೇಕೆ ಎಂಬ ಬಗ್ಗೆ ಎಂದಾದರೂ ಯೋಚಿಸಿದ್ದೀರೇನು? ನೀವು ಸ್ಕೂಲಿಗೆ ಹೋಗುವುದೇಕೆ, ಕಾಲೇಜಿಗೆ ಹೋಗುವುದೇಕೆ, ಈ ಎಲ್ಲ ಮಾಹಿತಿಯನ್ನು, ಜ್ಞಾನವನ್ನು ನಿಮ್ಮ ತಲೆಯೊಳಗೆ ತುರುಕುತ್ತಿರುವುದೇಕೆ ಎಂಬುದನ್ನು ತಿಳಿದುಕೊಳ್ಳುವುದು ಮುಖ್ಯವಲ್ಲವೇ? ನಾವು ಶಿಕ್ಷಣ ಎಂದು ಕರೆಯುತ್ತೇವಲ್ಲ, ಅದೇನು? ನಿಮ್ಮ ತಂದೆತಾಯಿಯರು ನಿಮ್ಮನ್ನು ಇಲ್ಲಿಗೆ ಕಳಿಸಿದ್ದಾರೆ, ನೀವು ಬಂದಿದ್ದೀರಿ. ಬಹುಶಃ ಅವರೂ ಪರೀಕ್ಷೆಗಳನ್ನು ಪಾಸು ಮಾಡಿ ಡಿಗ್ರಿಗಳನ್ನು ಪಡೆದಿರಬಹುದು. ನೀವೇಕೆ ಇಲ್ಲಿದ್ದೀರಿ ಎಂಬ ಪ್ರಶ್ನೆಯನ್ನು ಕೇಳಿಕೊಂಡಿದ್ದೀರೇನು? ನಿಮ್ಮ ಶಿಕ್ಷಕರು ಈ ಪ್ರಶ್ನೆಯನ್ನು ಕೇಳಿದ್ದಾರೇನು? ನಿಮ್ಮ ಶಿಕ್ಷಕರಿಗೆ ತಾವು ಇಲ್ಲಿರುವುದೇಕೆ ಎಂದು ತಿಳಿದಿದೆಯೇನು? ಈ ಎಲ್ಲ ಹೋರಾಟ, ಓದುವ, ಪರೀಕ್ಷೆ ಪಾಸು ಮಾಡುವ, ಮನೆಯನ್ನು ಬಿಟ್ಟು ದೂರ ಬಂದು ಇರುವ, ಭಯಪಡದೆ ಆಟವಾಡುವ, ಇತ್ಯಾದಿ ಏನೇನನ್ನೋ ಮಾಡುವ ಸಂಘರ್ಷ ಏಕೆ ಎಂದು ನೀವು ತಿಳಿದುಕೊಳ್ಳಬೇಡವೇ? ಕೇವಲ ಪರೀಕ್ಷೆಯನ್ನು ಪಾಸು ಮಾಡಲು ನಿಮಗೆ ಸಹಾಯಮಾಡುವುದಷ್ಟೇ ಅಲ್ಲದೆ ಇಂಥ ಪ್ರಶ್ನೆಗಳನ್ನು ಪರಿಶೀಲಿಸಲು ಕೂಡ ಶಿಕ್ಷಕರು ನೆರವು ನೀಡಬೇಕಲ್ಲವೇ?

ಕೆಲಸ ಹಿಡಿಯಬೇಕು, ಹೊಟ್ಟೆಯ ಪಾಡಿಗೆ ದಾರಿ ನೋಡಿಕೊಳ್ಳಬೇಕು, ಅದಕ್ಕೆ ಕೆಲವು ಪರೀಕ್ಷೆಗಳನ್ನು ಪಾಸುಮಾಡಬೇಕು ಎಂದು ಹುಡುಗರಿಗೆ ಗೊತ್ತಿದೆ. ಹುಡುಗಿಯರೇಕೆ ಪರೀಕ್ಷೆಗಳನ್ನು ಪಾಸುಮಾಡಬೇಕು? ತಮಗೆ ಒಳ್ಳೆಯ ಗಂಡಂದಿರು ದೊರೆಯಲಿ ಎಂದು ಹುಡುಗಿಯರು ಶಿಕ್ಷಣವನ್ನು ಪಡೆಯಬೇಕು. ನಗಬೇಡಿ, ಇದರ ಬಗ್ಗೆ ಯೋಚನೆಮಾಡಿ. ನೀವು ಮನೆಯಲ್ಲಿ ತುಂಟತನ, ತರಲೆ ಮಾಡುತ್ತೀರಿ ಎಂದು ನಿಮ್ಮ ಅಪ್ಪ ಅಮ್ಮಂದಿರು ಶಾಲೆಗೆ ಕಳಿಸಿದ್ದಾರೇನು? ಪರೀಕ್ಷೆಗಳನ್ನು ಪಾಸುಮಾಡುವುದರಿಂದ ಬದುಕಿನ ಇಡೀ ಮಹತ್ವ ನಿಮಗೆ ತಿಳಿಯುತ್ತದೇನು? ಕೆಲವರು ಪರೀಕ್ಷೆಗಳನ್ನು ಪಾಸುಮಾಡುವುದರಲ್ಲಿ ಬಹಳ

ಜಾಣರು. ಆದರೆ ಪಾಸಾಗಿರುವುದರಿಂದಲೇ ಅವರೆಲ್ಲ ವಿವೇಕಿಗಳು ಎಂದರ್ಥವಲ್ಲ. ಪರೀಕ್ಷೆಯಲ್ಲಿ ಹೇಗೆ ಪಾಸಾಗಬೇಕು ಎಂದು ತಿಳಿಯದಿರುವ ಅನೇಕರು ಪರೀಕ್ಷೆಗಳಲ್ಲಿ ಪಾಸಾದವರಿಗಿಂತ ಬಹಳ ವಿವೇಕಿಗಳಾಗಿರಬಹುದು. ಅವರು ಕೇವಲ ಪಾಸಾಗುವುದಕ್ಕೆಂದೇ ಪಾಠಗಳನ್ನು ಉರುಹೊಡೆದವರಿಗಿಂತ ಹೆಚ್ಚು ಚೆನ್ನಾಗಿ ಅನೇಕ ಕೆಲಸಗಳನ್ನು ಮಾಡುವವರಾಗಿರಬಹುದು, ಅನೇಕ ವಿಷಯಗಳನ್ನು ಕುರಿತು ಗಹನವಾಗಿ ಯೋಚಿಸಬಲ್ಲವರಾಗಿರಬಹುದು.

ಅನೇಕ ಹುಡುಗರು ತಮಗೆ ಒಳ್ಳೆಯ ಕೆಲಸ ಸಿಗಲಿ ಎಂದೇ ಓದುತ್ತಾರೆ. ಒಳ್ಳೆಯ ಕೆಲಸ ಸಂಪಾದಿಸಿಕೊಳ್ಳುವುದೇ ಅವರ ಬದುಕಿನ ಉದ್ದೇಶ. ಕೆಲಸ ಸಿಕ್ಕಮೇಲೆ ಏನಾಗುತ್ತದೆ? ಮದುವೆಯಾಗುತ್ತದೆ, ಮಕ್ಕಳಾಗುತ್ತಾರೆ, ಇಡೀ ಬದುಕು ಯಂತ್ರಕ್ಕೆ ಸಿಕ್ಕ ಬದುಕು ಆಗಿಬಿಡುತ್ತದೆ, ಅಲ್ಲವೇ? ಗುಮಾಸ್ತರೋ, ಲಾಯರೋ, ಪೋಲಿಸರೋ ಆಗುತ್ತಾರೆ. ಹೆಂಡತಿ ಮಕ್ಕಳೊಡನೆ ಬೇರೆ ಬೇರೆ ಕಾರಣಕ್ಕೆ ಜಗಳವಾಡುತ್ತಾ ಇರುತ್ತಾರೆ. ಸಾಯುವವರೆಗೂ ಅವರ ಬದುಕು ನಿರಂತರವಾದ ಯುದ್ಧವೇ ಆಗಿರುತ್ತದೆ.

ಮತ್ತೆ, ನೀವು, ಹುಡುಗಿಯರು, ನಿಮ್ಮ ಗತಿ ಏನಾಗುತ್ತದೆ? ಮದುವೆ ಆಗುತ್ತೀರಿ. ನಿಮ್ಮ ಉದ್ದೇಶವೂ ಅದೇ, ನಿಮ್ಮ ಅಪ್ಪಅಮ್ಮಂದಿರ ಯೋಚನೆಯೂ ಅದೇ. ಆಮೇಲೆ ಮಕ್ಕಳಾಗುತ್ತವೆ. ನಿಮ್ಮ ಬಳಿ ಕೊಂಚ ಹಣ ಸೇರಿದರೆ ಸೀರೆಗಳ ಬಗ್ಗೆ, ನಿಮ್ಮ ಅಲಂಕಾರದ ಬಗ್ಗೆ ಯೋಚನೆ ಶುರುವಾಗುತ್ತದೆ. ನಿಮ್ಮ ಗಂಡಂದಿರೊಡನೆ ಆಡುವ ಜಗಳದ ಬಗ್ಗೆ, ಬೇರೆಯವರು ನಿಮ್ಮ ಬಗ್ಗೆ ಏನಂದುಕೊಳ್ಳುತ್ತಾರೋ ಎಂಬ ಬಗ್ಗೆ ತಲೆಕೆಡಿಸಿಕೊಳ್ಳುತ್ತಾ ಜೀವನ ಕಳೆಯುತ್ತೀರಿ.

ಇದನ್ನೆಲ್ಲ ನೀವು ಕಾಣಬಲ್ಲಿರಾ? ನಿಮ್ಮದೇ ಬದುಕಿನಲ್ಲಿ, ನಿಮ್ಮ ನೆರೆಹೊರೆಯವರಲ್ಲಿ ಹೀಗಾಗಿರುವುದರ ಬಗ್ಗೆ ನಿಮ್ಮಲ್ಲಿ ಎಚ್ಚರವಿದೆಯೇ? ಸದಾಕಾಲವೂ ಇದು ಹೀಗೆಯೇ ನಡೆಯುತ್ತಿರುವುದನ್ನು ಗಮನಿಸಿದ್ದೀರಾ? ಶಿಕ್ಷಣದ ಅರ್ಥವೇನು, ನಿಮಗೆ ಶಿಕ್ಷಣ ಏಕೆ ಬೇಕು, ನಿಮಗೆ ಶಿಕ್ಷಣ ಬೇಕೆಂದು ನಿಮ್ಮ ಅಪ್ಪ ಅಮ್ಮ ಏಕೆ ಬಯಸುತ್ತಾರೆ, ಶಿಕ್ಷಣದ ಮಹತ್ವದ ಬಗ್ಗೆ ಉದ್ದುದ್ದ ಭಾಷಣಗಳನ್ನೇಕೆ ಮಾಡುತ್ತಾರೆ ಎಂದೆಲ್ಲ ಕಂಡುಕೊಳ್ಳುವುದು ಬೇಡವೇ? ನೀವು ಬರ್ನಾಡ್ ಶಾ ಬರೆದಿರುವ ನಾಟಕಗಳನ್ನು ಓದಿರಬಹುದು, ಶೇಕ್ಸ್‌ಪಿಯರ್ ಬರೆದ ಪುಸ್ತಕಗಳಿಂದ, ವಾಲ್ಟೇರನ ಅಥವ ಇತ್ತೀಚಿನ ಫಿಲಾಸಫರನ ಪುಸ್ತಕಗಳಿಂದ ಕೊಟೇಶನ್‌ಗಳನ್ನು ನೀವು ಹೇಳಬಹುದು, ಆದರೆ ನೀವು ಸ್ವತಃ ವಿವೇಕಿಗಳಲ್ಲದಿದ್ದರೆ, ಸೃಜನಶೀಲರಾಗದಿದ್ದರೆ, ಈ ಶಿಕ್ಷಣದ ಮಹತ್ವವೇನು, ಸಾರ್ಥಕತೆಯೇನು?

ವಿವೇಕಿಗಳಾಗುವುದು ಹೇಗೆ ಎಂಬುದನ್ನು ಕಂಡುಕೊಳ್ಳುವುದು ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಮಹತ್ವದ ಸಂಗತಿಯಲ್ಲವೇ? ಶಿಕ್ಷಣವೆಂದರೆ ಓದಿ ಪರೀಕ್ಷೆಯನ್ನು ಪಾಸುಮಾಡುವ ಸಾಮರ್ಥ್ಯವಷ್ಟೇ ಅಲ್ಲ. ಜಾಣರಾದ ಯಾರು ಬೇಕಾದರೂ ಈ ಕೆಲಸ ಮಾಡಿಯಾರು. ವಿವೇಕವನ್ನು ಬೆಳೆಸುವುದೇ ಶಿಕ್ಷಣ, ಅಲ್ಲವೇ? ವಿವೇಕವೆಂದರೆ ಬೇರೆಯವರನ್ನು ತುಳಿದು ತಾನು ಮೇಲೆ ಬರುವ ತಂತ್ರಗಾರಿಕೆಯಲ್ಲ. ವಿವೇಕವೆಂಬುದು ತಂತ್ರಗಾರಿಕೆಗಿಂತ ಬೇರೆಯೇ ಆಗಿರಬೇಕಲ್ಲವೇ? ಭಯವಿಲ್ಲದಿರುವಾಗ ವಿವೇಕವಿರುತ್ತದೆ. ಬೇರೆಯವರು ನಿಮ್ಮ ಬಗ್ಗೆ ಏನು ಆಡಿಕೊಳ್ಳುತ್ತಾರೆ, ನಿಮ್ಮ ಅಪ್ಪ ಅಮ್ಮ ಏನು ಹೇಳುತ್ತಾರೆ ಎಂದೆಲ್ಲ ಯೋಚಿಸಿದಾಗ ಭಯವಾಗುತ್ತದೆ. ಬೇರೆಯವರು ನಿಮ್ಮನ್ನು ಟೀಕಿಸುತ್ತಾರೆ, ನಿಮ್ಮನ್ನು ಶಿಕ್ಷಿಸುತ್ತಾರೆ, ಪರೀಕ್ಷೆಯಲ್ಲಿ ಪಾಸಾಗದಿರಬಹುದು ಎಂಬೆಲ್ಲ ಕಾರಣಗಳಿಂದ ಭಯ ಹುಟ್ಟುತ್ತದೆ. ಶಿಕ್ಷಕರು ನಿಮ್ಮನ್ನು ಬಯ್ದಾಗ, ನಿಮ್ಮ ತರಗತಿಯಲ್ಲಿ, ಶಾಲೆಯಲ್ಲಿ, ನೀವಿರುವ ಪರಿಸರದಲ್ಲಿ ನೀವು ಜನಪ್ರಿಯರಲ್ಲದಿರುವಾಗ, ನಿಧಾನವಾಗಿ ನಿಮ್ಮೊಳಗೆ ಭಯ ಮೂಡತೊಡಗುತ್ತದೆ.

ವಿವೇಕಕ್ಕೆ ಅನೇಕ ಅಡತಡೆಗಳಿವೆ. ಅವುಗಳಲ್ಲಿ ಭಯವೇ ಅತ್ಯಂತ ಮುಖ್ಯವಾದುದು, ಅಲ್ಲವೇ? ನೀವು, ನಾನು, ನಾವೆಲ್ಲರೂ ಚಿಕ್ಕಂದಿನಿಂದಲೂ ಭಯದ ಬಗ್ಗೆ ಎಚ್ಚರವನ್ನು ಬೆಳೆಸಿಕೊಂಡು, ಭಯದ ಕಾರಣಗಳನ್ನು ಅರ್ಥಮಾಡಿಕೊಂಡು, ಭಯವಿಲ್ಲದೆ ಬದುಕುವುದನ್ನು ಕಲಿಸುವುದೇ ಶಿಕ್ಷಣದ ಸಾರ, ಅಲ್ಲವೆ?

ನಿಮ್ಮಲ್ಲಿ ಭಯವಿದೆ ಎಂದು ನಿಮಗೆ ಗೊತ್ತಿದೆಯೇ? ನಿಮ್ಮಲ್ಲಿ ಭಯವಿದೆ, ಅಲ್ಲವೇ? ಅಥವ ನೀವು ಭಯಮುಕ್ತರಾಗಿದ್ದೀರೋ? ಅಪ್ಪ ಅಮ್ಮಂದಿರ ಬಗ್ಗೆ, ನಿಮ್ಮ ಶಿಕ್ಷಕರ ಬಗ್ಗೆ, ಜನ ನಿಮ್ಮನ್ನು ಕುರಿತು ಆಡಿಕೊಳ್ಳುತ್ತಾರೆ ಎಂಬ ಬಗ್ಗೆ ನಿಮ್ಮಲ್ಲಿ ಭಯವಿದೆಯೇ? ನಿಮ್ಮ ತಂದೆತಾಯಿಯರು, ಅಥವ ಸಮಾಜ ಒಪ್ಪದಿರುವಂಥ ಕೆಲಸವನ್ನು ನೀವು ಮಾಡಿದಿರಿ ಎಂದಿಟ್ಟುಕೊಳ್ಳೋಣ. ಆಗ ನಿಮಗೆ ಭಯವಾಗುವುದಿಲ್ಲವೇ? ನಿಮ್ಮ ಜಾತಿಯವನಲ್ಲದ, ನಿಮ್ಮ ಅಂತಸ್ತಿಗೆ ತಕ್ಕವನಲ್ಲದ ಯಾರನ್ನೋ ಮದುವೆಯಾಗಲು ಬಯಸುತ್ತೀರಿ ಎಂದಿಟ್ಟುಕೊಳ್ಳೋಣ. ಆಗ ಜನ ಏನೆನ್ನುತ್ತಾರೋ ಎಂದು ನಿಮಗೆ ಭಯವಾಗುವುದಿಲ್ಲವೇ? ನಾಳೆ ನಿಮ್ಮನ್ನು ಮದುವೆಯಾಗುವವನು ಸಾಕಷ್ಟು ಹಣ ಸಂಪಾದಿಸದಿದ್ದರೆ, ಅವನಿಗೆ ಒಳ್ಳೆಯ ಕೆಲಸ, ಗೌರವ ಅಂತಸ್ತುಗಳಿಲ್ಲದಿದ್ದರೆ, ನಿಮಗೆ ನಾಚಿಕೆ ಎನ್ನಿಸುವುದಿಲ್ಲವೇ? ನಿಮ್ಮ ಗೆಳೆಯ ಗೆಳತಿಯರು ನಿಮ್ಮ ಬಗ್ಗೆ ಏನು ಆಡಿಕೊಳ್ಳುತ್ತಾರೋ ಎಂದು ನಿಮಗೆ ಭಯವಾಗುತ್ತದಲ್ಲವೇ? ಖಾಯಿಲೆಗಳ ಬಗ್ಗೆ, ಸಾವಿನ ಬಗ್ಗೆ ನಿಮಗೆ ಭಯವಿಲ್ಲವೇ?

ನಾವೆಲ್ಲರೂ ಭಯಭೀತರು. ಅಷ್ಟು ಬೇಗ ಇಲ್ಲ ಎಂಬಂತೆ ತಲೆ ಆಡಿಸಬೇಡಿ. ಬಹುಶಃ ನಾವು ಭಯದ ಬಗ್ಗೆ ಯೋಚಿಸಿಯೇ ಇಲ್ಲ. ಕೊಂಚ ಯೋಚಿಸಿನೋಡಿದರೆ ಈ ಜಗತ್ತಿನಲ್ಲಿ ಎಲ್ಲರೂ, ದೊಡ್ಡವರು, ಮಕ್ಕಳು ಎಲ್ಲರೂ, ಒಂದಲ್ಲ ಒಂದು ರೀತಿಯ ಭಯದಿಂದ ಪೀಡಿತರಾಗಿರುವುದು, ಅವರ ಮನಸ್ಸುಗಳ ಆಳದಲ್ಲಿ ಭಯವು ಅವಿತುಕೊಂಡು ಜಗಿದು ತಿನ್ನುತ್ತಿರುವುದು ತಿಳಿಯುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಭಯಮುಕ್ತನಾಗಿ, ಭಯಮುಕ್ತನಾದ್ದರಿಂದಲೇ ವಿವೇಕಿಯಾಗಿ ಇರುವಂತೆ ಮಾಡುವುದೇ ಶಿಕ್ಷಣದ ಕಾರ್ಯವಲ್ಲವೇ? ನಾವು ಶಾಲೆಯಿಂದ ನಿರೀಕ್ಷಿಸುವುದು ಇದನ್ನೇ. ಇದು ಸಾಧ್ಯವಾಗಬೇಕಾದರೆ ಶಿಕ್ಷಕರು ಸ್ವತಃ ಭಯಮುಕ್ತರಾಗಿರಬೇಕು. ಶಿಕ್ಷಕರೇ ಸ್ವತಃ ತಮ್ಮ ಗಂಡ ಅಥವ ಹೆಂಡತಿಯ ಬಗ್ಗೆ, ನೆರೆಹೊರೆಯವರ ಅಭಿಪ್ರಾಯಗಳ ಬಗ್ಗೆ, ಭಯಭೀತರಾಗಿದ್ದು ನಿರ್ಭಯತೆಯ ಬಗ್ಗೆ ಭಾಷಣ ನೀಡುವುದರಿಂದ ಏನು ಉಪಯೋಗ?

ಭಯವಿದ್ದರೆ ಸೃಜನಶೀಲ ಉತ್ಸಾಹ (ಇನಿಶಿಯೇಟಿವ್) ವಿರುವುದಿಲ್ಲ. ಸಹಜವಾಗಿ, ಸ್ವಚ್ಛಂದವಾಗಿ, ಯಾವ ರೀತಿಯ ಮಾರ್ಗದರ್ಶನವೂ ಇಲ್ಲದೆ, ಬಲವಂತವಿಲ್ಲದೆ, ನಿಯಂತ್ರಣವಿಲ್ಲದೆ, ಒರಿಜಿನಲ್ ಆಗಿ ಏನನ್ನಾದರೂ ಮಾಡುವುದು ಸಾಧ್ಯವಾಗುವುದೇ ಉತ್ಸಾಹದಿಂದ. ಉತ್ಸಾಹವೆಂದರೆ ನೀವು ಪ್ರೀತಿಸುವ ಕೆಲಸವನ್ನು ಮಾಡುವುದು ಎಂದರ್ಥ. ರಸ್ತೆಯ ಮಧ್ಯದಲ್ಲಿ ಜನರ ಓಡಾಟಕ್ಕೆ ಅಡ್ಡಿಯಾಗಿ ಬಿದ್ದಿರುವ ಕಲ್ಲನ್ನು ಎಂದಾದರೂ ಎತ್ತಿಹಾಕಿದ್ದೀರಾ? ನೀವು ವಾಕ್ ಹೋಗುವಾಗ ಹಳ್ಳಿಯವರು, ಬಡವರು, ರೈತರನ್ನು ಕಂಡಿದ್ದೀರಾ? ಸಹಜವಾಗಿ, ಸ್ವಚ್ಛಂದವಾಗಿ, ಹೃತ್ಪೂರ್ವಕವಾಗಿ, ಹೀಗೆ ಮಾಡಿ ಎಂದು ಯಾರೂ ಹೇಳದೆ, ಅವರಿಗೆ ಸಹಾಯವಾಗುವಂತೆ ಏನಾದರೂ ಮಾಡಿದ್ದೀರಾ?

ನೋಡಿ, ನಿಮ್ಮಲ್ಲಿ ಭಯವಿದ್ದರೆ ಈ ಇಂಥವೆಲ್ಲ ನಿಮ್ಮ ಪಾಲಿಗೆ ಇಲ್ಲವಾಗುತ್ತವೆ. ನಿಮ್ಮಲ್ಲಿ ಭಯವಿದ್ದರೆ ಸುತ್ತಲೂ ಏನಾಗುತ್ತಿದೆ ಎಂಬ ಬಗ್ಗೆ ಯಾವ ಸಂವೇದನೆಯೂ ಇಲ್ಲದೆ, ಏನನ್ನೂ ಗಮನಿಸದೆ ಸುಮ್ಮನೆ ಇರುವವರಾಗುತ್ತೀರಿ. ನಿಮ್ಮಲ್ಲಿ ಭಯವಿದ್ದರೆ ಸಂಪ್ರದಾಯಕ್ಕೆ ಬದ್ಧರಾಗಿರುತ್ತೀರಿ, ಯಾರೋ ಗುರುವನ್ನೋ ನಾಯಕನನ್ನೋ ಹಿಂಬಾಲಿಸುವವರಾಗಿರುತ್ತೀರಿ. ನೀವು ಸಂಪ್ರದಾಯಕ್ಕೆ ಬದ್ಧರಾಗಿದ್ದರೆ, ನಿಮ್ಮ ಗಂಡನಿಗೋ ಹೆಂಡತಿಗೋ ಹೆದರಿ ಬದುಕುವವರಾಗಿದ್ದರೆ ಮನುಷ್ಯವ್ಯಕ್ತಿತ್ವದ ಘನತೆಯನ್ನು ಕಳೆದುಕೊಳ್ಳುತ್ತೀರಿ.

ಪರೀಕ್ಷೆಗಳು ಎಷ್ಟೇ ಅಗತ್ಯವಾದರೂ ಕೇವಲ ಪಾಸಾಗುವುದನ್ನು ಮಾತ್ರವಲ್ಲದೆ ನಿಮ್ಮನ್ನು ಭಯಮುಕ್ತರನ್ನಾಗಿ ಮಾಡುವುದು ಶಿಕ್ಷಣದ

ಕರ್ತವ್ಯವಲ್ಲವೇ? ನೀವು ಸಂಪೂರ್ಣವಾಗಿ ಭಯಮುಕ್ತರಾಗುವುದಕ್ಕೆ ನಿಮ್ಮ ಎಳವೆಯಿಂದಲೇ ಸಹಾಯವನ್ನು ಒದಗಿಸುವುದು, ಆ ಮೂಲಕ ಈ ಜಗತ್ತಿನಲ್ಲಿ ನಿರ್ಭಯರಾದ, ನಿಜವಾಗಿ ಉತ್ಸಾಹಶೀಲರಾದ ವ್ಯಕ್ತಿಗಳಾಗಿ ಬದುಕಲು ನೆರವು ನೀಡುವುದು ಇದೆಯಲ್ಲ ಇದೇ ಶಿಕ್ಷಣದ ಮತ್ತು ಪ್ರತಿಯೊಬ್ಬ ಶಿಕ್ಷಕರ ಮೂಲಭೂತ ಕರ್ತವ್ಯ. ನೀವು ಮತ್ತೊಬ್ಬರನ್ನು ಅನುಕರಿಸುತ್ತಾ ನಕಲು ಮಾಡುತ್ತಾ ಇರುವಾಗ, ಸಂಪ್ರದಾಯಕ್ಕೆ ಬದ್ಧರಾಗಿ ಇರುವಾಗ, ರಾಜಕೀಯ ನಾಯಕ ಅಥವ ಸ್ವಾಮೀಜಿಗಳನ್ನು ಹಿಂಬಾಲಿಸುತ್ತಾ ಇರುವಾಗ ನಿಮ್ಮ ಉತ್ಸಾಹ ನಷ್ಟವಾಗುತ್ತದೆ. ಯಾರನ್ನೇ ಆಗಲಿ ಅನುಸರಿಸುವುದರಿಂದ, ಅನುಕರಿಸುವುದರಿಂದ ವಿವೇಕಕ್ಕೆ ಧಕ್ಕೆಯಾಗುತ್ತದೆ. ಅನುಸರಿಸುವ ಕ್ರಿಯೆಯಲ್ಲಿಯೇ ಭಯ ಹುಟ್ಟುತ್ತದೆ. ಬದುಕಿನ ಅಸಾಮಾನ್ಯ ಜಟಿಲತೆ, ಸಂಘರ್ಷ, ದುಃಖ, ಬಡತನ, ಶ್ರೀಮಂತಿಕೆ, ಚೆಲುವು, ಹಕ್ಕಿ, ಪಕ್ಷಿ, ಹರಿಯುವ ನದಿ, ಸೂರ್ಯೋದಯ, ಸೂರ್ಯಾಸ್ತಗಳ ಸೌಂದರ್ಯ, ಇವೆಲ್ಲವೂ ನಿಮ್ಮದಾಗದಂತೆ ಭಯ ನಿಮ್ಮ ಮನಸ್ಸಿನ ಬಾಗಿಲನ್ನು ಮುಚ್ಚಿಬಿಡುತ್ತದೆ. ಭಯಭೀತರಾಗಿದ್ದಾಗ ನೀವು ಇವೆಲ್ಲದರ ಬಗ್ಗೆ ಸಂವೇದಿಸುವ ಸಾಮರ್ಥ್ಯವನ್ನೇ ಕಳೆದುಕೊಂಡುಬಿಡುತ್ತೀರಿ.

ನಾವೀಗ ಮಾತನಾಡಿರುವ ವಿಷಯಗಳನ್ನು ವಿವರಿಸುವಂತೆ ನಿಮ್ಮ ಶಿಕ್ಷಕರನ್ನು ಕೇಳುತ್ತೀರಾ? ದಯವಿಟ್ಟು ಕೇಳಿ ನೋಡಿ. ಈ ವಿಷಯಗಳು ಶಿಕ್ಷಕರಿಗೆ ಅರ್ಥವಾಗಿವೆಯೇ ಎಂಬುದನ್ನು ನೀವೇ ಕಂಡುಕೊಳ್ಳಿ. ಭಯವಿಲ್ಲದಂತೆ, ವಿವೇಕಿಗಳಾಗುವಂತೆ ನಿಮಗೆ ಸಹಾಯಮಾಡುವುದರಿಂದ ಶಿಕ್ಷಕರಿಗೇ ಸ್ವತಃ ಲಾಭವಾಗುತ್ತದೆ, ಸಹಾಯ ದೊರೆತಂತಾಗುತ್ತದೆ. ಇಂಥ ಕೆಲಸವನ್ನು ಮಾಡುವುದಕ್ಕೆ ನಮಗೆ ಬಿಎ, ಎಂಎ ಮಾಡಿರುವ ಶಿಕ್ಷಕರಲ್ಲ, ನಿಜವಾಗಿ ಬಹಳ ವಿವೇಕಿಗಳಾದ ಶಿಕ್ಷಕರ ಅಗತ್ಯವಿದೆ. ಸಾಧ್ಯವಿದ್ದರೆ ದಿನಕ್ಕೆ ಒಂದು ಗಂಟೆಯ ಕಾಲವಾದರೂ ಇಂಥ ವಿಷಯಗಳ ಬಗ್ಗೆ ಶಿಕ್ಷಕರೊಡನೆ ಚರ್ಚಿಸಲು ಸಾಧ್ಯವಾಗುವಂತೆ ಪೀರಿಯಡ್ ಏರ್ಪಡಿಸಿಕೊಳ್ಳಿ. ಏಕೆಂದರೆ ನೀವು ಬೆಳೆದು ದೊಡ್ಡವರಾಗುತ್ತೀರಿ, ಗಂಡನನ್ನೋ ಹೆಂಡತಿಯನ್ನೋ ಪಡೆಯುತ್ತೀರಿ, ನಿಮಗೆ ಮಕ್ಕಳಾಗುತ್ತವೆ. ಬದುಕು ಎಂದರೇನು ಎಂದು ನಿಮಗೆ ತಿಳಿಯಬೇಕು. ಜೀವನೋಪಾಯ ಕಂಡುಕೊಳ್ಳುವ ಹೋರಾಟ, ಬದುಕಿನ ಜಂಜಡ, ಕಾರ್ಪಣ್ಯ, ಅಸಾಮಾನ್ಯ ಚೆಲುವು ಎಲ್ಲವನ್ನೂ ನೀವು ತಿಳಿಯಬೇಕು. ಇವನ್ನೆಲ್ಲ ಕಲಿಯುವುದಕ್ಕೆ ಶಾಲೆಯೇ ತಕ್ಕ ಸ್ಥಳ. ನಿಮ್ಮ ಉಪಾಧ್ಯಾಯರು ನಿಮಗೆ ಕೇವಲ ಗಣಿತ, ಭೂಗೋಳ, ಚರಿತ್ರೆ, ವಿಜ್ಞಾನಗಳನ್ನು ಕಲಿಸಿದರೆ ಸಾಲದು. ನೀವು ಸದಾ ಎಚ್ಚರವಾಗಿರುತ್ತಾ, ಪ್ರಶ್ನಿಸುತ್ತಾ, ನೀವೇ ಸ್ವತಃ ಕಂಡುಕೊಳ್ಳುತ್ತಾ, ನಿಮ್ಮ ಸ್ವಂತ ಉತ್ಸಾಹವನ್ನು ವೃದ್ಧಿಗೊಳಿಸಿಕೊಳ್ಳುವುದು ಮುಖ್ಯ.

# ಉತ್ಸಾಹಕ್ಕೆ ಅಡ್ಡಿ-ಭಯ

ಭಯದ ಸಮಸ್ಯೆಯನ್ನು ಕುರಿತು ವಿಚಾರಮಾಡುತ್ತಿದ್ದೆವು. ನಾವೆಲ್ಲರೂ ಭಯಪೀಡಿತರು; ಭಯವು ಉತ್ಸಾಹಕ್ಕೆ ಅಡ್ಡಿಮಾಡುತ್ತದೆ, ಉತ್ಸಾಹವನ್ನು ಕುಗ್ಗಿಸುತ್ತದೆ. ಏಕೆಂದರೆ ಬಳ್ಳಿಯೊಂದು ಮರವನ್ನು ತಬ್ಬಿಕೊಳ್ಳುವಂತೆ ನಾವೂ ಮಾನಸಿಕವಾಗಿ ಇತರರನ್ನು ತಬ್ಬಿಹಿಡಿದುಕೊಳ್ಳುವಂತೆ ಮಾಡುತ್ತದೆ, ಭಯ. ಭಯಗೊಂಡಾಗ ನಾವು ನಮ್ಮ ತಂದೆ, ತಾಯಿ, ಗಂಡ, ಹೆಂಡತಿ, ಮಗ, ಮಗಳು, ನಮ್ಮ ಆಸ್ತಿ ಇಂಥವನ್ನು ನೆಚ್ಚಿ ಅವಕ್ಕೇ ನೇತುಬೀಳುತ್ತೇವೆ. ಇದು ಭಯದ ಹೊರರೂಪ. ಅಂತರಂಗದಲ್ಲಿ ಭಯವಿದ್ದಾಗ ಒಂಟಿಯಾಗಿರುವುದಕ್ಕೆ ಅಂಜುತ್ತೇವೆ. ನಮ್ಮ ಬಳಿ ಅನೇಕ ಸೀರೆ, ಒಡವೆ, ಆಸ್ತಿ ಎಲ್ಲವೂ ಇರಬಹುದು. ಆದರೆ ಮಾನಸಿಕವಾಗಿ, ನಮ್ಮ ಅಂತರಂಗಗಳಲ್ಲಿ ನಾವೆಲ್ಲರೂ ಬಡವರು. ಅಂತರಂಗದ ಬಡತನ ಹೆಚ್ಚಾದಷ್ಟೂ ಜನ, ಅಂತಸ್ತು, ಸ್ಥಾನ ಮಾನ, ಆಸ್ತಿ ಇತ್ಯಾದಿಗಳಿಗೆ ಜೋತುಬಿದ್ದು ಶ್ರೀಮಂತಿಕೆಯನ್ನು ಪಡೆದುಕೊಳ್ಳಲು ಬಯಸುತ್ತೇವೆ.

ನಾವು ಭಯಗೊಂಡಾಗ ಹೊರಗಿನ ವಸ್ತುಗಳಿಗೆ ಜೋತುಬೀಳುವುದಷ್ಟೇ ಅಲ್ಲ ಪರಂಪರೆಯಂಥ ಅಂತರಂಗದ ಸಂಗತಿಗಳನ್ನೂ ಬಲವಾಗಿ ನೆಚ್ಚಿಕೊಳ್ಳತೊಡಗುತ್ತೇವೆ. ವಯಸ್ಸಾದ ಅನೇಕರಿಗೆ, ಅಂತರಂಗದಲ್ಲಿ ಕೊರತೆ ಇದ್ದು ಒಳಗೆ ಖಾಲಿಯಾಗಿರುವವರಿಗೆ, ಪರಂಪರೆಯು ಬಹಳ ಮುಖ್ಯವೆನಿಸುತ್ತದೆ. ಈ ಸಂಗತಿಯನ್ನು ನಿಮ್ಮ ಗೆಳೆಯರಲ್ಲಿ, ಅಪ್ಪ ಅಮ್ಮಂದಿರಲ್ಲಿ, ಶಿಕ್ಷಕರಲ್ಲಿ ಗಮನಿಸಿದ್ದೀರಾ? ನಿಮ್ಮೊಳಗೇ ಹೀಗೆಲ್ಲ ಇರುವುದನ್ನು ಗಮನಿಸಿದ್ದೀರಾ? ಭಯಗೊಂಡ ಕ್ಷಣದಲ್ಲಿ, ಅಂತರಂಗದಲ್ಲಿ ಭಯ ತಲೆ ಎತ್ತಿದ ಕ್ಷಣದಲ್ಲಿ, ಗೌರವ, ಸಭ್ಯಸ್ತಿಕೆಗಳ ಮುಸುಕನ್ನು ಮೇಲೆ ಎಳೆದುಕೊಳ್ಳುವುದಕ್ಕೆ ಬಯಸುತ್ತೀರಿ. ಪರಂಪರೆಯನ್ನು, ಸಂಪ್ರದಾಯವನ್ನು ಅನುಸರಿಸಲು ತೊಡಗುತ್ತೀರಿ. ಆದ್ದರಿಂದಲೇ ಉತ್ಸಾಹವನ್ನು ಕಳೆದುಕೊಳ್ಳುತ್ತೀರಿ. ಯಾವ ಉತ್ಸಾಹವೂ ಇಲ್ಲದೆ ಸುಮ್ಮನೆ ಅನುಸರಿಸುವವರಾದರೆ ನಿಮ್ಮ ಪಾಲಿಗೆ ಪರಂಪರೆ ಬಹಳ ಮುಖ್ಯವಾಗಿಬಿಡುತ್ತದೆ. ಜನ ಹೇಳಿಕೊಂಡು ಬಂದಿರುವ ಮಾತಿನ ಪರಂಪರೆ, ತಲೆಮಾರುಗಳಿಂದ ದತ್ತವಾಗಿ ಸಾಗಿಬಂದಿರುವ ಪರಂಪರೆ, ಅರ್ಥವಿಲ್ಲದೆ ಕೇವಲ ಅನುಕರಣೆ ಮಾತ್ರವಾಗಿರುವುದರಿಂದಲೇ ನಿಶ್ಶಕ್ತವಾದ ನಿರ್ವೀರ್ಯವಾದ,

ಉತ್ಸಾಹರಹಿತವಾದ ಪರಂಪರೆ, ಇದು ಭಯಗೊಂಡ ಮನಸ್ಸಿಗೆ ಬಹಳ ಮುಖ್ಯ ಎನಿಸತೊಡಗುತ್ತದೆ.

ಭಯಗೊಂಡಾಗ ಅನುಕರಿಸುವ ಮನೋವೃತ್ತಿ ತಲೆ ಎತ್ತುತ್ತದೆ. ಇದನ್ನು ಗಮನಿಸಿದ್ದೀರೇನು? ಭಯಭೀತರಾದವರು ಇತರರನ್ನು ಅನುಕರಿಸುತ್ತಾರೆ. ಪರಂಪರೆಗೆ, ತಂದೆ, ತಾಯಿ, ಹೆಂಡತಿ, ಸೋದರ, ಗಂಡ ಮುಂತಾದವರಿಗೆ ಜೋತುಬೀಳುತ್ತಾರೆ. ಅನುಕರಣೆಯು ಉತ್ಸಾಹವನ್ನು ನಾಶಮಾಡುತ್ತದೆ. ನೀವು ಮರದ ಚಿತ್ರವೊಂದನ್ನು ಬರೆಯಲು ಹೊರಟರೆ ಮರವು ಹೇಗಿದೆಯೋ ಹಾಗೆ ಅನುಕರಿಸಿ ಕಾಪಿ ಮಾಡುವುದಿಲ್ಲ. ಹಾಗೆ ಮಾಡಿದರೆ ಅದು ಫೋಟೋ ಆಗುತ್ತದೆ. ಮರವನ್ನೋ, ಹೂವನ್ನೋ, ಸೂರ್ಯಾಸ್ತವನ್ನೋ ಚಿತ್ರಿಸುವುದೆಂದರೆ ಅವೆಲ್ಲವೂ ನಿಮ್ಮಲ್ಲಿ ಹುಟ್ಟಿಸುವ ಭಾವನೆ, ಅರ್ಥ, ಮಹತ್ವಗಳನ್ನು ಚಿತ್ರಿಸುವುದೆಂದೇ ಅರ್ಥ. ಕಂಡದ್ದನ್ನು ಅದು ಇರುವಂತೆಯೇ ಕಾಪಿ ಮಾಡದೆ ಅದರಲ್ಲಿ ನೀವು ಕಂಡ ಮಹತ್ವನ್ನು ಚಿತ್ರಿಸುವುದು ಮುಖ್ಯ. ಹೀಗೆ ಚಿತ್ರಿಸಲು ಪ್ರಯತ್ನಿಸುವುದರಿಂದ ಸೃಜನಶೀಲ ಪ್ರಕ್ರಿಯೆಯನ್ನು ಎಚ್ಚರಗೊಳಿಸಿಕೊಳ್ಳುತ್ತೀರಿ. ಹೀಗಾಗಬೇಕಾದರೆ ಸ್ವತಂತ್ರವಾದ ಮನಸ್ಸು ಇರಬೇಕು. ಮನಸ್ಸಿನ ಮೇಲೆ ಪರಂಪರೆಯ ಭಾರ, ಅನುಕರಣೆಯ ಭಾರ, ಇರಬಾರದು. ನಿಮ್ಮ ಬದುಕನ್ನೇ ನೋಡಿಕೊಳ್ಳಿ, ನಿಮ್ಮ ಸುತ್ತ ಇರುವವರ ಬದುಕನ್ನು ನೋಡಿ. ಎಲ್ಲವೂ ಎಷ್ಟು ಪರಂಪರಾಗತವಾಗಿ, ಅನುಕರಣೆಯಿಂದಲೇ ತುಂಬಿದೆ, ಅಲ್ಲವೇ!

ಕೆಲವು ಸಂಗತಿಗಳನ್ನು ನೀವು ಅನುಕರಣೆ ಮಾಡಲೇಬೇಕಾಗುತ್ತದೆ. ತೊಡುವ ಬಟ್ಟೆ, ನೀವು ಓದುವ ಪುಸ್ತಕ, ಕಲಿಯುವ ಭಾಷೆಗಳು ಇವೆಲ್ಲ ಅನುಕರಣೆಯ ರೂಪಗಳೇ. ಆದರೆ ನೀವು ಈ ಹಂತವನ್ನೂ ಅಗತ್ಯವಾಗಿ ಮೀರಬೇಕು. ನಿಮ್ಮಷ್ಟಕ್ಕೆ ನೀವೇ ಯೋಚನೆ ಮಾಡಿ ಎಲ್ಲ ಸಂಗತಿಗಳನ್ನೂ ಅರ್ಥಮಾಡಿಕೊಳ್ಳುವ ಸ್ವಾತಂತ್ರ್ಯ ನಿಮಗಿರಬೇಕು. ಬೇರೆಯವರು ಹೇಳಿದ ಮಾತುಗಳನ್ನು ಆಲೋಚನೆ ಮಾಡದೆ ಸುಮ್ಮನೆ ಒಪ್ಪಿಕೊಳ್ಳಬಾರದು. ನಿಮಗೆ ಹೇಳುವವರು ಯಾರು ಬೇಕಾದರೂ ಆಗಿರಬಹುದು–ನಿಮ್ಮ ಶಾಲೆಯ ಶಿಕ್ಷಕರು, ನಿಮ್ಮ ಅಪ್ಪ, ಅಮ್ಮ, ನಿಮ್ಮ ಧರ್ಮದ ಗುರು, ಯಾರು ಏನೇ ಹೇಳಲಿ ಸುಮ್ಮನೆ ಒಪ್ಪಿಕೊಳ್ಳಬೇಡಿ. ಎಲ್ಲವನ್ನೂ ನೀವೇ ಸ್ವತಃ ಆಲೋಚಿಸಿ ಅರ್ಥಮಾಡಿಕೊಳ್ಳುವುದು, ಬೇರೆಯವರ ಮಾತನ್ನು ಸುಮ್ಮನೆ ಒಪ್ಪಿಕೊಳ್ಳದಿರುವುದು ಬಹಳ ಮುಖ್ಯ. ಏಕೆಂದರೆ ಇತರರನ್ನು ಅನುಸರಿಸುವುದು ಭಯವನ್ನು ಸೂಚಿಸುತ್ತದೆ, ಅಲ್ಲವೇ? ಸ್ವರ್ಗ, ಮುಕ್ತಿ, ಒಳ್ಳೆಯ ಕೆಲಸ, ಏನಾದರೂ ಸರಿ, ನೀವು ಬಯಸಿದ್ದನ್ನು ನೀಡಲು ಯಾರಾದರೂ ಮುಂದೆ ಬಂದಾಗ ನನಗೆ ಅದು ಸಿಗದೆ ಹೋದರೆ ಎಂಬ ಭಯ ನಿಮ್ಮಲ್ಲಿ

ಮೂಡುತ್ತದೆ. ಆದ್ದರಿಂದಲೇ ಒಪ್ಪಿಕೊಳ್ಳಲು, ಅನುಸರಿಸಲು ತೊಡಗುತ್ತೀರಿ. ಏನಾದರೂ ಬೇಕೆಂಬ ಬಯಕೆ ನಿಮ್ಮಲ್ಲಿರುವವರೆಗೆ ಭಯ ಇದ್ದೇ ಇರುತ್ತದೆ. ಅದು ನಿಮ್ಮ ಮನಸ್ಸು ಹೇಳುವ ಮನಸ್ಸು ಆಗುವಂತೆ ಮಾಡುತ್ತದೆ. ಸ್ವತಂತ್ರವಾಗಿರಲು ನಿಮಗೆ ಸಾಧ್ಯವೇ ಆಗುವುದಿಲ್ಲ.

ಸ್ವತಂತ್ರವಾದ ಮನಸ್ಸೆಂದರೆ ಏನೆಂದು ನಿಮಗೆ ಗೊತ್ತೇ? ನಿಮ್ಮ ಮನಸ್ಸನ್ನೇ ನೀವು ಪರಿಶೀಲಿಸಿ ನೋಡಿಕೊಂಡಿದ್ದೀರಾ? ನಿಮ್ಮ ಮನಸ್ಸು ಸ್ವತಂತ್ರವಾಗಿಲ್ಲ, ಅಲ್ಲವೇ? ಗೆಳೆಯರು ನಿಮ್ಮ ಬಗ್ಗೆ ಏನು ಹೇಳುತ್ತಾರೆ ಎಂದು ಗಮನಿಸುತ್ತಲೇ ಇರುತ್ತೀರಿ. ಮುಳ್ಳು ತಂತಿಯ ಬೇಲಿಯೊಳಗಿರುವ ಮನೆಯಂತಿದೆ ನಿಮ್ಮ ಮನಸ್ಸು. ಇಂಥ ಸ್ಥಿತಿಯಲ್ಲಿ ಹೊಸತೇನೂ ಸಂಭವಿಸಲಾರದು. ಭಯ ಇಲ್ಲದಿರುವಾಗ ಮಾತ್ರ ಹೊಸತೇನಾದರೂ ಆಗುತ್ತಿರುತ್ತದೆ. ಭಯವಿಲ್ಲದೆ ಸ್ವತಂತ್ರವಾಗಿರುವುದಕ್ಕೆ ಮನಸ್ಸಿಗೆ ಬಹಳ ಕಷ್ಟವಾಗುತ್ತದೆ. ಏಕೆಂದರೆ ಸ್ವತಂತ್ರವಾಗಿರುವುದೆಂದರೆ ಅನುಕರಿಸುವ, ಹಿಂಬಾಲಿಸುವ ಆಸೆ ನಿಜವಾಗಿ ಇಲ್ಲದಿರುವುದು ಎಂದರ್ಥ. ಹೇರಳವಾಗಿ ಆಸ್ತಿಯನ್ನು ಸಂಪಾದಿಸುವ ಅಥವ ಪರಂಪರೆಗೆ ಅನುಗುಣವಾಗಿ ಬದುಕುವ ಆಸೆ ಇಲ್ಲದಿರುವುದು ಎಂದರ್ಥ. ಆದರೆ ಬೇರೆಯವರು ಕೆರಳುವಂತೆ, ಇತರರಿಗೆ ತೊಂದರೆ ಆಗುವಂತೆ ಕಿರಿಕಿರಿಯಾಗುವಂತೆ ವರ್ತಿಸಬೇಕೆಂದು ಅರ್ಥವಲ್ಲ.

ಭಯ ಇಲ್ಲದಿರುವಾಗ ಮನಸ್ಸಿಗೆ ಸ್ವಾತಂತ್ರ್ಯ ದೊರೆಯುತ್ತದೆ. ಪ್ರದರ್ಶನದ ಆಸೆಯಾಗಲಿ, ಅಂತಸ್ತು, ಗೌರವಗಳನ್ನು ಪಡೆಯಲು ತಂತ್ರಗಳನ್ನು ಹೂಡುವುದಾಗಲೀ ಇಲ್ಲದಿರುವಾಗ ಅನುಕರಣೆಯ ಆಸೆಯೂ ಇರುವುದಿಲ್ಲ, ಭಯವೂ ಇರುವುದಿಲ್ಲ. ಹೀಗೆ ಪರಂಪರೆಗೆ ಬದ್ಧವಾಗದ ಸ್ವತಂತ್ರವಾದ ಮನಸ್ಸನ್ನು ಹೊಂದಿರುವುದು ಬಹಳ ಮುಖ್ಯ. ಏಕೆಂದರೆ ಪರಂಪರೆ ಎಂಬುದು ಅಭ್ಯಾಸಗಳನ್ನು ರೂಪಿಸುವ ಯಾಂತ್ರಿಕತೆ, ಅಷ್ಟೆ.

ಇದೆಲ್ಲ ಬಹಳ ಕಷ್ಟ ಎನಿಸುತ್ತದೆಯೇ? ನೀವು ಕಲಿಯುವ ಗಣಿತ ಅಥವ ಭೂಗೋಳಕ್ಕಿಂತ ಕಷ್ಟವಲ್ಲ ಇದು. ಬಹಳ ಸುಲಭ, ಆದರೆ ಈ ಬಗ್ಗೆ ನೀವು ಯೋಚನೆ ಮಾಡಿಯೇ ಇಲ್ಲ ಅಷ್ಟೆ. ಸ್ಕೂಲಿಗೆ ಹೋಗಿ ಯಾವ ಯಾವದೋ ವಿಷಯಗಳ ಬಗ್ಗೆ ಮಾಹಿತಿಯನ್ನು ಪಡೆಯಲು ಹತ್ತು ಅಥವ ಹದಿನೈದು ವರ್ಷಗಳನ್ನು ಕಳೆಯುತ್ತೀರಿ. ಆದರೆ ಈಗ ನಾನು ಹೇಳುತ್ತಿರುವಂಥ ವಿಷಯಗಳ ಬಗ್ಗೆ ಪೂರ್ಣವಾಗಿ ಆಲೋಚಿಸಲು ಒಂದು ವಾರವಾಗಲೀ, ಒಂದು ದಿನವಾಗಲೀ ವ್ಯಯಮಾಡುವುದಿಲ್ಲ ನೀವು. ಆದ್ದರಿಂದಲೇ ಇದೆಲ್ಲ ಕಷ್ಟ ಅನ್ನಿಸುತ್ತದೆಯೇ ಹೊರತು ನಿಜವಾಗಿ ಇದು ಬಹಳ ಸುಲಭ. ನಿಮ್ಮ

ಮನಸ್ಸು ಹೇಗೆ ವರ್ತಿಸುತ್ತದೆ, ಕಾರ್ಯ ನಿರ್ವಹಿಸುತ್ತದೆ, ಪ್ರತಿಕ್ರಿಯೆ ತೋರುತ್ತದೆ ಎಂಬುದನ್ನು ನೀವೇ ಸ್ವತಃ ಗಮನಿಸಲು ಕೊಂಚ ಸಮಯ ನೀಡಿದರೆ ಎಷ್ಟು ಸುಲಭ ಎಂದು ತಿಳಿಯುತ್ತದೆ. ನೀವು ಇನ್ನೂ ಚಿಕ್ಕವರಾಗಿರುವಾಗಲೇ ನಿಮ್ಮ ಮನಸ್ಸನ್ನು ಸ್ವತಃ ಅರ್ಥಮಾಡಿಕೊಳ್ಳಲು ತೊಡಗುವುದು ಬಹಳ ಮುಖ್ಯ. ಇಲ್ಲದಿದ್ದರೆ ಯಾವುದೋ ಒಂದು ಅರ್ಥವಿಲ್ಲದ ಪರಂಪರೆಗೆ ಸೇರಿದವರಾಗಿ, ಬೇರೆಯವರನ್ನು ಅನುಕರಿಸುತ್ತಾ, ಭಯಸ್ಥರಾಗಿ ಬೆಳೆದುಬಿಡುತ್ತೀರಿ. ನೀವು ಸ್ವತಂತ್ರವಾಗಲು ಆಗುವುದೇ ಇಲ್ಲ.

ನಮ್ಮ ದೇಶದಲ್ಲಿ ಜನ ಎಷ್ಟೊಂದು ಸಂಪ್ರದಾಯಸ್ಥರು ಎಂಬುದನ್ನು ಗಮನಿಸಿದ್ದೀರೇನು? ನೀವು ಮದುವೆಯಾಗಬೇಕಾದ ಗಂಡನ್ನೋ, ಹೆಣ್ಣನ್ನೋ ತಂದೆತಾಯಿಗಳು ಹುಡುಕುತ್ತಾರೆ. ಸಾಂಪ್ರದಾಯಿಕವಾದ ರೀತಿಯಲ್ಲೇ ಮದುವೆ ನಡೆಯುತ್ತದೆ. ಅರ್ಥವೇ ಇಲ್ಲದ ಏನೇನೋ ಆಚರಣೆಗಳನ್ನು ನೀವು ಮಾಡಲೇಬೇಕಾಗುತ್ತದೆ. ಅಥವಾ ಬದುಕಿನಲ್ಲಿ ನೀವು ಅನುಸರಿಸಲೇಬೇಕಾದ ನಾಯಕರು ಇರುತ್ತಾರೆ. ನಿಮ್ಮ ಸುತ್ತಮುತ್ತ ಇರುವ ಸಂಗತಿಗಳನ್ನು ಗಮನಿಸಿ ನೋಡಿ. ಇಡೀ ಬದುಕಿನ ರೀತಿಯಲ್ಲಿ ಸಂಪ್ರದಾಯದ ಅಧಿಕಾರ ಸ್ಥಿರವಾಗಿ ಸ್ಥಾಪಿತವಾಗಿರುವುದು ಕಾಣುತ್ತದೆ. ಗುರು, ರಾಜಕೀಯ ಪಕ್ಷಗಳು, ತಂದೆತಾಯಿಗಳು, ಸಾರ್ವಜನಿಕ ಅಭಿಪ್ರಾಯ, ಎಲ್ಲವೂ ಅಧಿಕಾರ ಕೇಂದ್ರಗಳೇ. ನಾಗರಿಕತೆ ಪ್ರಾಚೀನವಾದಷ್ಟೂ ಪರಂಪರೆಯ ಭಾರ ಹೆಚ್ಚಾಗಿರುತ್ತದೆ, ಅನುಕರಿಸಬೇಕಾದ ಸಂಗತಿಗಳ ಭಾರ ಹೊತ್ತ ನಿಮ್ಮ ಮನಸ್ಸು ಸ್ವತಂತ್ರವಾಗಿರುವುದೇ ಇಲ್ಲ. ರಾಜಕೀಯ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ ಇತ್ಯಾದಿಗಳ ಬಗ್ಗೆ ಮಾತನಾಡಬಹುದು. ಆದರೆ ವ್ಯಕ್ತಿಯಾಗಿ ನಿಮಗೆ ಬದುಕಿನ ಸಂಗತಿಗಳನ್ನು ಸ್ವತಃ ನೀವೇ ಅರ್ಥಮಾಡಿಕೊಳ್ಳುವ ಸ್ವಾತಂತ್ರ್ಯವಿಲ್ಲದೆ ಸದಾ ಹಿಂಬಾಲಕರಾಗಿಯೇ ಉಳಿದುಬಿಡುತ್ತೀರಿ. ಯಾರೋ ಗುರು, ಶಿಕ್ಷಕ, ಯಾವುದೋ ಆದರ್ಶ, ಮೂಢನಂಬಿಕೆ, ಇಂಥ ಏನನ್ನೋ ಹಿಂಬಾಲಿಸುತ್ತಾ ಅನುಕರಿಸುತ್ತಾ ಇದ್ದುಬಿಡುತ್ತೀರಿ.

ನಿಮ್ಮ ಇಡೀ ಬದುಕು ಕೆಲವೇ ಆದರ್ಶಗಳಿಗೆ, ವಿಚಾರಗಳಿಗೆ ಬದ್ಧವಾದ, ಸಂಕುಚಿತವಾದ ಪರಿಮಿತವಾದ ಬದುಕು ಆಗಿಬಿಡುತ್ತದೆ. ನಿಮ್ಮ ಮನಸ್ಸಿನ ಆಳದಲ್ಲಿ ಭಯ ಮನೆಮಾಡಿಕೊಂಡಿರುತ್ತದೆ. ಭಯ ಇರುವಾಗ ಸ್ವತಂತ್ರವಾದ ಆಲೋಚನೆಯನ್ನು ಮಾಡಲು ಹೇಗೆ ತಾನೇ ಸಾಧ್ಯವಾಗುತ್ತದೆ? ಆದ್ದರಿಂದಲೇ ಈ ಎಲ್ಲ ವಿಚಾರಗಳ ಬಗ್ಗೆ ಎಚ್ಚರವನ್ನು ಬೆಳೆಸಿಕೊಳ್ಳುವುದು ಮುಖ್ಯ. ನೀವು ಹಾವನ್ನು ಕಂಡರೆ, ಅದು ವಿಷದ ಜಂತು ಎಂಬ ಎಚ್ಚರ ನಿಮಗೆ ಇದ್ದರೆ ದೂರ ಸರಿದುಬಿಡುತ್ತೀರಿ. ಆದರೆ ನೀವು ನಿಮ್ಮ ಜೀವನೋತ್ಸಾಹವನ್ನು ಕುಗ್ಗಿಸುವ

ಅನೇಕ ಬಗೆಯ ಅನುಕರಣೆಗಳಿಗೆ ಬದ್ಧರಾಗಿರುವುದು ನಿಮಗೆ ಗೊತ್ತೇ ಇಲ್ಲ. ಎಚ್ಚರವೇ ಇಲ್ಲದೆ ಅನುಕರಣೆಗೆ ಸಿಕ್ಕಿಬಿದ್ದಿದ್ದೀರಿ. ಅನುಕರಣೆಯ ಆಸೆ ಹೇಗೆ ನಿಮ್ಮನ್ನು ಹಿಡಿದಿಟ್ಟುಕೊಂಡಿದೆ, ಜನ ಏನೆನ್ನುತ್ತಾರೋ ಎಂಬ ಭಯದಿಂದ ನೀವು ಹೇಗೆ ಅನುಕರಣಶೀಲರಾಗಿದ್ದೀರಿ, ನಿಮ್ಮ ಅಪ್ಪ, ಅಮ್ಮ, ಗುರುಗಳು, ಶಿಕ್ಷಕರ ಬಗ್ಗೆ ಹೇಗೆ ಭಯಗೊಂಡಿದ್ದೀರಿ, ಎಂಬುದರ ಬಗೆಗೆಲ್ಲ ಎಚ್ಚರವನ್ನು ಬೆಳೆಸಿಕೊಂಡರೆ, ನಿಮ್ಮನ್ನು ಕಟ್ಟಿಹಾಕಿರುವ ಅನುಕರಣೆಗಳನ್ನು ಪರೀಕ್ಷಿಸುವ ಎಚ್ಚರ ನಿಮ್ಮಲ್ಲಿ ಮೂಡಿದರೆ ಆಗ ಗಣಿತವನ್ನೋ ಮತ್ತೇನನ್ನೋ ಕಲಿಯುವಂತೆಯೇ ಈ ವಿಷಯಗಳನ್ನೂ ಕಲಿಯಬಹುದು.

ಉದಾಹರಣೆಗೆ, ಹೆಂಗಸರನ್ನು ಗಂಡಸರಿಗಿಂತ ಬೇರೆಯ ರೀತಿಯಲ್ಲಿ ನಡೆಸಿಕೊಳ್ಳುವ ಬಗ್ಗೆ ನಿಮ್ಮಲ್ಲಿ ಎಚ್ಚರವಿದೆಯೇ? ಹೆಂಗಸರನ್ನು ಗಂಡಸರು ತಿರಸ್ಕಾರದ ಭಾವದಿಂದ ನೋಡುವುದೇಕೆ? ಸಾಮಾನ್ಯವಾಗಿ ಗಂಡಸರಂತೂ ಹೆಂಗಸರನ್ನು ಕೀಳಾಗಿಯೇ ಕಾಣುತ್ತಾರೆ. ನೀವು ದೇವಾಲಯಗಳಿಗೆ ಹೋಗುವುದೇಕೆ? ಆಚರಣೆಗಳನ್ನು ಮಾಡುವುದೇಕೆ? ಗುರುವನ್ನು ಹಿಂಬಾಲಿಸುವುದೇಕೆ?

ಈ ಎಲ್ಲ ಸಂಗತಿಗಳ ಬಗ್ಗೆ ನಿಮ್ಮಲ್ಲಿ ಮೊದಲು ಎಚ್ಚರ ಮೂಡಬೇಕು. ಆಮೇಲೆ ಅವುಗಳನ್ನು ಪ್ರಶ್ನಿಸಿ, ಪರಿಶೀಲಿಸಿ, ಅಧ್ಯಯನ ಮಾಡಬಹುದು. ಆದರೆ ಕಳೆದ ಮೂವತ್ತು ಶತಮಾನಗಳಿಂದ ಇದೆಲ್ಲ ಹೀಗೆಯೇ ನಡೆಯುತ್ತಾ ಬಂದಿದೆ ಎಂದು ನೀವು ಕುರುಡರಂತೆ ಎಲ್ಲವನ್ನೂ ಒಪ್ಪಿ ಅನುಸರಿಸುತ್ತಾ ನಡೆದರೆ ಬದುಕಿಗೆ ಅರ್ಥವೇ ಇರುವುದಿಲ್ಲ, ಅಲ್ಲವೇ? ಜಗತ್ತಿಗೆ ಇಂದು ಬೇಕಾಗಿರುವುದು ಹೆಚ್ಚು ಜನ ನಾಯಕರಲ್ಲ, ಹೆಚ್ಚು ಜನ ಅನುಕರಣಶೀಲರಲ್ಲ, ಹೆಚ್ಚು ಜನ ಹಿಂಬಾಲಕರಲ್ಲ. ಸೃಜನಶೀಲತೆಯ ಸ್ವಾತಂತ್ರ್ಯದ ಸಲುವಾಗಿ, ಆಲೋಚನೆಯ ಸ್ವಾತಂತ್ರ್ಯದ ಸಲುವಾಗಿ, ಪ್ರೀತಿಯ ಸ್ವಾತಂತ್ರ್ಯದ ಸಲುವಾಗಿ ಮನಸ್ಸನ್ನು ಮುಕ್ತವಾಗಿಟ್ಟುಕೊಂಡು ಇಂಥ ಪ್ರಶ್ನೆಗಳನ್ನು ಕುರಿತು, ಕಾಟಾಚಾರಕ್ಕಲ್ಲ, ನಿಜವಾಗಿ ಗಂಭೀರವಾಗಿ ಪರಿಶೀಲಿಸಬಲ್ಲ ನಿಮ್ಮಂಥ, ನನ್ನಂಥ ಜನ ಜಗತ್ತಿಗೆ ಹೆಚ್ಚು ಹೆಚ್ಚಾಗಿ ಬೇಕಾಗಿದ್ದಾರೆ.

ಶಿಕ್ಷಣವೆಂದರೆ ಸಂಬಂಧಗಳ ಅನ್ವೇಷಣೆ. ಇತರ ಮನುಷ್ಯರೊಂದಿಗೆ, ವಸ್ತುಗಳೊಂದಿಗೆ, ನಿಸರ್ಗದೊಂದಿಗೆ ನಮ್ಮ ಸಂಬಂಧದ ಸ್ವರೂಪ ನಿಜವಾಗಿ ಹೇಗಿದೆ ಎಂಬುದನ್ನು ಅನ್ವೇಸಿಕೊಳ್ಳುವ ದಾರಿಯೇ ಶಿಕ್ಷಣ. ಆದರೆ ಮನಸ್ಸು ಐಡಿಯಾಗಳನ್ನು ಸೃಷ್ಟಿಸುತ್ತದೆ. ಈ ಐಡಿಯಾಗಳು ಎಷ್ಟು ಪ್ರಬಲವೂ ಪ್ರಮುಖವೂ ಆಗಿಬಿಡುತ್ತದೆಂದರೆ ನಾವು ಅವನ್ನು ಮೀರಿ ನೋಡುವುದಕ್ಕೆ ಸಾಧ್ಯವೇ ಇಲ್ಲದಂತೆ ಮಾಡಿಬಿಡುತ್ತವೆ. ಎಲ್ಲಿಯವರೆಗೆ ನಿಮ್ಮಲ್ಲಿ

ಭಯವಿರುತ್ತದೆಯೋ ಅಲ್ಲಿಯವರೆಗೆ ಪರಂಪರೆಯನ್ನು ಹಿಂಬಾಲಿಸುವುದಿರುತ್ತದೆ. ಎಲ್ಲಿಯವರೆಗೆ ಭಯವಿರುತ್ತದೆಯೋ ಅಲ್ಲಿಯವರೆಗೆ ಅನುಕರಣೆ ಇರುತ್ತದೆ. ಸುಮ್ಮನೆ ಅನುಕರಿಸುವ ಮನಸ್ಸು ಯಾಂತ್ರಿಕವಾದ ಮನಸ್ಸು, ಅಲ್ಲವೇ? ಅದು ಯಂತ್ರದಂತೆ ಕಾರ್ಯ ನಿರ್ವಹಿಸುವ ಮನಸ್ಸೇ ಹೊರತು ಸೃಜನಶೀಲವಾದ, ಸಮಸ್ಯೆಗಳನ್ನು ಪರಿಶೀಲಿಸಿ ಎದುರಿಸಬಲ್ಲ ಮನಸ್ಸು ಅಲ್ಲ. ಯಂತ್ರ ಕೆಲವು ಕೆಲಸಗಳನ್ನು ಮಾಡಬಹುದು, ನಿರ್ದಿಷ್ಟ ಫಲಿತಾಂಶಗಳನ್ನೂ ತಂದುಕೊಡಬಹುದು, ಆದರೆ ಸೃಜನಶೀಲವಲ್ಲ. ಯಾಂತ್ರಿಕವಾದ ಮನಸ್ಸೂ ಅಷ್ಟೇ.

ಈಗ ನೀವು, ನಾನು, ಇಲ್ಲಿನ ಶಿಕ್ಷಕರು, ಅಧಿಕಾರಿಗಳು ಎಲ್ಲರೂ ಸೇರಿ ಈ ವಿಚಾರಗಳನ್ನು ಒಟ್ಟಾಗಿ ಪರಿಶೀಲಿಸಬೇಕು. ಏಕೆಂದರೆ ಈ ಶಾಲೆಯನ್ನು ಬಿಟ್ಟು ಹೊರಹೋಗುವಾಗ ಸಂಪ್ರದಾಯದ ಮೌಢ್ಯವನ್ನು ಅವಲಂಬಿಸದೆ ಸ್ವತಃ ನೀವೇ ಆಲೋಚನೆಗಳನ್ನು ಮಾಡಬಲ್ಲಂಥ ಪ್ರಬುದ್ಧ ವ್ಯಕ್ತಿಗಳಾಗಿರಬೇಕು ನೀವು. ಆಗ ಘನತೆಯುಳ್ಳ ಸ್ವತಂತ್ರ ಮನುಷ್ಯ ವ್ಯಕ್ತಿಗಳಾಗುತ್ತೀರಿ. ಇಡೀ ಶಿಕ್ಷಣದ ಉದ್ದೇಶ ಅದೇ. ಕೆಲವು ಪರೀಕ್ಷೆಗಳನ್ನು ಪಾಸುಮಾಡಲು ಸಹಾಯಮಾಡಿ, ಆನಂತರ ಲಾಯರೋ, ಗುಮಾಸ್ತನೋ, ಗೃಹಿಣಿಯೋ ಏನೋ ಒಂದು, ನಿಮಗೆ ಇಷ್ಟವಿಲ್ಲದ, ಪ್ರೀತಿ ಇಲ್ಲದ ಕೆಲಸ ಮಾಡುತ್ತಾ, ಬದುಕು ಕಳೆಯುವಂತೆ ನಿಮ್ಮನ್ನು ಜಗತ್ತಿಗೆ ದಬ್ಬಿಬಿಡುವುದು ಶಿಕ್ಷಣದ ಉದ್ದೇಶವಲ್ಲ. ಭಯವಿಲ್ಲದೆ ಸ್ವತಂತ್ರವಾಗಿ ಆಲೋಚಿಸಲು ನೆರವು ನೀಡುವ, ವಿಷಯಗಳನ್ನು ಪರಿಶೀಲಿಸಿ ಸ್ವತಃ ಅರ್ಥಮಾಡಿಕೊಳ್ಳುವುದಕ್ಕೆ ಪ್ರೋತ್ಸಾಹ ಕೊಡುವ, ಅಂಥ ಶಿಕ್ಷಣ ಬೇಕು ಎಂದು ನೀವು ಒತ್ತಾಯಿಸಬೇಕು. ಅಂಥ ಶಿಕ್ಷಣ ಕೊಡಿ ಎಂದು ಶಿಕ್ಷಕರನ್ನು ಬಲವಂತಮಾಡಬೇಕು. ಇಲ್ಲದಿದ್ದರೆ ಬದುಕೇ ವ್ಯರ್ಥ, ಅಲ್ಲವೇ? ನೀವು ಎಜುಕೇಟೆಡ್ ಆಗುತ್ತೀರಿ. ಬಿಎ ಅಥವ ಎಂಎ ಮಾಡುತ್ತೀರಿ. ಹೊಟ್ಟೆಯ ಪಾಡಿಗಾಗಿ ನಿಮಗೆ ಇಷ್ಟವಿಲ್ಲದ ಕೆಲಸಕ್ಕೆ ಸೇರುತ್ತೀರಿ. ಮದುವೆಯಾಗುತ್ತೀರಿ, ಮಕ್ಕಳಾಗುತ್ತವೆ. ಇಡೀ ನಿಮ್ಮ ಜೀವನವನ್ನು ಇಷ್ಟವಿಲ್ಲದ ಕೆಲಸಕ್ಕೆ ಅಂಟಿಕೊಂಡು ಕಳೆಯುತ್ತೀರಿ. ಮನೆಯಲ್ಲಿ ಜಗಳ, ಮನಸ್ಸಿನಲ್ಲಿ ದುಃಖ, ಕಳವಳ, ಬದುಕಿನಲ್ಲಿ ಕಾರ್ಪಣ್ಯ ಎಲ್ಲವೂ ತಲೆ ಎತ್ತುತ್ತವೆ. ಮತ್ತಷ್ಟು ಮಕ್ಕಳು, ಮತ್ತಷ್ಟು ಹಸಿವು, ಮತ್ತಷ್ಟು ದುಃಖ ಬಿಟ್ಟರೆ ಬದುಕಿನಲ್ಲಿ ಎದುರುನೋಡುವಂಥದ್ದು ಏನೂ ಇಲ್ಲವಾಗುತ್ತದೆ. ನೀವು ಹೀಗೆ ಆಗುವಂತೆ ಮಾಡುವುದು ಶಿಕ್ಷಣದ ಗುರಿಯೇ? ಖಂಡಿತ ಅಲ್ಲ. ತೀಕ್ಷ್ಣವಾದ ವಿವೇಕ ಉಳ್ಳವರಾಗಿ ನೀವು ಮಾಡಬೇಕಾದ ಕೆಲಸವನ್ನು ಮಾಡುತ್ತ ಇರಲು ನಿಮಗೆ ಸಹಾಯಮಾಡಬೇಕು ಶಿಕ್ಷಣ.

ಆದ್ದರಿಂದಲೇ ಮಕ್ಕಳೇ, ನೀವು ಇನ್ನೂ ಚಿಕ್ಕವರಾಗಿರುವಾಗಲೇ ನಿಮ್ಮೊಳಗೆ ಅತೃಪ್ತಿಯ ಜ್ವಾಲೆಯನ್ನು ಹೊತ್ತಿಸಿಕೊಳ್ಳಿ. ಸದಾ ಕ್ರಾಂತಿಯ

ಸ್ಥಿತಿಯಲ್ಲಿರಲಿ ನಿಮ್ಮ ಮನಸ್ಸು. ಇದು ಪರಿಶೀಲಿಸುವ, ಅನ್ವೇಷಿಸುವ, ಬೆಳೆಯುವ ಕಾಲ. ಆದ್ದರಿಂದಲೇ ನಿಮಗೆ ಸರಿಯಾದ ಶಿಕ್ಷಣ ನೀಡುವಂತೆ ಅಪ್ಪ ಅಮ್ಮಂದಿರನ್ನು, ಶಿಕ್ಷಕರನ್ನು ಒತ್ತಾಯಿಸಿ. ಕ್ಲಾಸಿನಲ್ಲಿ ಸುಮ್ಮನೆ ಕುಳಿತು ಈ ರಾಜ, ಆ ಯುದ್ಧದ ಬಗ್ಗೆ ಮಾಹಿತಿಯನ್ನು ತಲೆಯಲ್ಲಿ ತುಂಬಿಕೊಳ್ಳುತ್ತ ಹೋಗಬೇಡಿ. ಶಿಕ್ಷಕರ ಬಳಿಗೆ ಹೋಗಿ ಪ್ರಶ್ನೆಗಳನ್ನು ಕೇಳಿ, ವಿಷಯಗಳನ್ನು ಪರಿಶೀಲಿಸಿ, ಸ್ವತಃ ಕಂಡುಕೊಳ್ಳಿ. ಒಂದು ವೇಳೆ ನಿಮ್ಮ ಶಿಕ್ಷಕರು ವಿವೇಕಿಗಳಲ್ಲದಿದ್ದರೆ ನಿಮ್ಮ ಪ್ರಶ್ನೆ, ಪರಿಶೀಲನೆಗಳ ಮೂಲಕ ಅವರೂ ವಿವೇಕಿಗಳಾಗುತ್ತಾರೆ. ಈ ಶಾಲೆಯನ್ನು ಬಿಟ್ಟು ಹೋಗುವಾಗ ನೀವು ಪ್ರಬುದ್ಧರಾಗುತ್ತಿರುತ್ತೀರಿ, ನಿಜವಾದ ಸ್ವತಂತ ವ್ಯಕ್ತಿಗಳಾಗಿ ಬೆಳೆಯುತ್ತಿತ್ತೀರಿ. ನಿಮ್ಮ ಬದುಕಿನ ಕೊನೆಯ ಕ್ಷಣದವರೆಗೆ ಕಲಿಯುತ್ತಲೇ ಇರುತ್ತೀರಿ. ಸಂತೋಷ ತುಂಬಿದ, ವಿವೇಕಿ ಮನುಷ್ಯ ವ್ಯಕ್ತಿಗಳಾಗಿರುತ್ತೀರಿ.

**ಪ್ರಶ್ನೆ:** ನಿರ್ಭಯತೆಯ ಅಭ್ಯಾಸವನ್ನು ಗಳಿಸಿಕೊಳ್ಳುವುದು ಹೇಗೆ?

**ಕೃಷ್ಣಮೂರ್ತಿ:** ನೀವು ಬಳಸುತ್ತಿರುವ ಪದವನ್ನು ಗಮನಿಸಿ. ಅಭ್ಯಾಸ ಎನ್ನುತ್ತಿದ್ದೀರಿ. ಅಭ್ಯಾಸವೆಂದರೆ ಮಾಡಿದ್ದನ್ನೇ ಮತ್ತೆ ಮತ್ತೆ ಮಾಡುತ್ತ ಹೋಗುವುದಲ್ಲವೇ? ಹಾಗೆ ಮಾಡಿದ್ದನ್ನೇ ಮಾಡುತ್ತಿದ್ದರೆ ಬೇಸರವಲ್ಲದೆ ಮತ್ತೇನು ತಾನೇ ಆದೀತು? ನಿರ್ಭಯತೆ ಎಂಬುದೊಂದು ಅಭ್ಯಾಸವೇ? ಬದುಕಿನಲ್ಲಿ ನಡೆಯುವ ಘಟನೆಗಳನ್ನು ನೇರವಾಗಿ ಕಂಡು, ಎದುರಿಸಿ, ಪರಿಶೀಲಿಸಿ, ಪರಿಹರಿಸಿಕೊಳ್ಳುವುದರಿಂದ ನಿರ್ಭಯತೆ ಮೂಡುತ್ತದೆಯೇ ಹೊರತು ಅಭ್ಯಾಸಕ್ಕೆ ವಶವಾದ ಜಡವಾದ ಮನಸ್ಸು ನಿರ್ಭಯವಾದ ಮನಸ್ಸಲ್ಲ.

ನೀವು ಅಭ್ಯಾಸವಶರಾಗಿ, ಅಭ್ಯಾಸಗಳಲ್ಲೇ ಬದುಕುತ್ತಾ, ಮಾಡಿದ್ದನ್ನೇ ಮಾಡುತ್ತಾ ಇದ್ದರೆ ಕೇವಲ ಅನುಕರಣೆಯ ಯಂತ್ರವಾಗಿರುತ್ತೀರಿ. ಅಭ್ಯಾಸವೆಂದರೆ ಪುನರುಕ್ತಿ. ಒಮ್ಮೆ ಮಾಡಿದ್ದನ್ನೇ ಮತ್ತೆ ಮತ್ತೆ ಯಾವ ಹೊಸ ಆಲೋಚನೆಯೂ ಇಲ್ಲದೆ ಮಾಡುತ್ತಾ ಇರುವುದು. ಹೀಗೆ ಮಾಡಿದರೆ ನಿಮ್ಮ ಸುತ್ತ ಗೋಡೆಯನ್ನು ಕಟ್ಟಿಕೊಳ್ಳುತ್ತೀರಿ. ನಿಮ್ಮ ಸುತ್ತಲೂ ಅಭ್ಯಾಸದ ಗೋಡೆಯನ್ನು ಕಟ್ಟಿಕೊಂಡಿದ್ದರೆ ನೀವು ಭಯಮುಕ್ತರಾಗಿರುವುದಿಲ್ಲ. ಹೀಗೆ ಗೋಡೆಯ ಹಿಂದೆ ಬದುಕುವುದೇ ನಿಮ್ಮ ಭಯಕ್ಕೆ ಕಾರಣವಾಗುತ್ತದೆ. ಬದುಕಿನಲ್ಲಿ ಆಗುವುದೆಲ್ಲವನ್ನೂ, ಪ್ರತಿಯೊಂದು ಸಮಸ್ಯೆ, ಪ್ರತಿಯೊಂದು ಘಟನೆ, ಪ್ರತಿಯೊಂದು ಆಲೋಚನೆ, ಪ್ರತಿಯೊಂದು ಭಾವನೆ, ಪ್ರತಿಯೊಂದು ಪ್ರತಿಕ್ರಿಯೆ ಎಲ್ಲವನ್ನೂ ಪರಿಶೀಲಿಸಿ ತಿಳಿದುಕೊಳ್ಳಲು ತೊಡಗಿದಾಗ ಭಯದಿಂದ ಬಿಡುಗಡೆ ದೊರೆಯುತ್ತದೆ.

# ಅಧಿಕಾರವು ವಿವೇಕವನ್ನು ನಾಶಮಾಡುತ್ತದೆ

ನಾವು ಭಯದ ಬಗ್ಗೆ, ಭಯವನ್ನು ನೀಗಿಕೊಳ್ಳುವ ಬಗ್ಗೆ, ವಿಚಾರ ಮಾಡುತ್ತಿದ್ದೆವು. ಭಯದಿಂದಾಗಿ ಮನಸ್ಸು ತನ್ನ ಸ್ವಾತಂತ್ರ್ಯವನ್ನು, ಸೃಜನಶೀಲತೆಯನ್ನು ಕಳೆದುಕೊಂಡು ಹೇಗೆ ವಿಕೃತಗೊಳ್ಳುತ್ತದೆ, ಉತ್ಸಾಹದ ಗುಣವನ್ನು ಉಳಿಸಿಕೊಳ್ಳುವುದು ಹೇಗೆ ಅತ್ಯಂತ ಪ್ರಮುಖವಾದದ್ದು ಎಂಬುದನ್ನು ನೋಡುತ್ತಿದ್ದೆವು.

ಅಧಿಕಾರದ ಪ್ರಶ್ನೆಯನ್ನೂ ನಾವು ಪರಿಶೀಲಿಸಬೇಕೆಂದು ತೋರುತ್ತದೆ. ಅಧಿಕಾರ ಅಥವ ಅಥಾರಿಟಿ ಎಂದರೇನೆಂದು ನಿಮಗೆ ಗೊತ್ತಿದೆ. ಆದರೆ ಅಧಿಕಾರ ಹೇಗೆ ಹುಟ್ಟುತ್ತದೆ ಎಂದು ನಿಮಗೆ ಗೊತ್ತೇ? ಸರ್ಕಾರಕ್ಕೆ ಅಧಿಕಾರವಿದೆ. ಅದು ರಾಜ್ಯದ, ಕಾನೂನಿನ, ಪೋಲೀಸರ, ಸೈನಿಕರ ಅಧಿಕಾರ. ನಿಮ್ಮ ಮೇಲೆ ನಿಮ್ಮ ತಂದೆ ತಾಯಿಯರಿಗೆ, ಶಿಕ್ಷಕರಿಗೆ ಅಧಿಕಾರವಿದೆ. ಆದ್ದರಿಂದಲೇ ನೀವು ಏನು ಮಾಡಬೇಕೆಂದು ಅವರೆಲ್ಲ ಹೇಳುತ್ತಾರೋ ಅದನ್ನೆಲ್ಲ ನೀವು ಮಾಡುತ್ತೀರಿ. ಇಷ್ಟು ಹೊತ್ತಿಗೇ ನೀವೆಲ್ಲ ಮಲಗಬೇಕು, ಇಂಥ ಊಟವನ್ನೇ ಮಾಡಬೇಕು, ಒಳ್ಳೆಯವರ ಜೊತೆಗೆ ಮಾತ್ರ ಸೇರಬೇಕು ಎಂದೆಲ್ಲ ಅವರು ನಿಮಗೆ ಹೇಳುತ್ತಾರೆ. ನಿಮ್ಮನ್ನು ಶಿಸ್ತಿಗೆ ಒಳಪಡಿಸುತ್ತಾರೆ, ಅಲ್ಲವೇ? ಏಕೆ? ನಿಮ್ಮ ಒಳ್ಳೆಯದಕ್ಕೇ ಇದೆಲ್ಲವೂ ಎಂದೆನ್ನುತ್ತಾರೆ. ಹೌದೇ? ಅದನ್ನು ಪರಿಶೀಲಿಸೋಣ. ಅದಕ್ಕೂ ಮೊದಲು ಅಧಿಕಾರ ಅಥವ ಅಥಾರಿಟಿ ಹೇಗೆ ಹುಟ್ಟುತ್ತದೆ ಎಂಬುದನ್ನು ನೋಡೋಣ. ಅಧಿಕಾರವೆಂದರೆ ಬಲವಂತ, ಒತ್ತಾಯ, ವ್ಯಕ್ತಿಗೆ ಮತ್ತೊಬ್ಬ ವ್ಯಕ್ತಿಯ ಮೇಲೆ ಕೆಲವರಿಗೆ ಅನೇಕರ ಮೇಲೆ ಅಥವಾ ಅನೇಕರಿಗೆ ಕೆಲವರ ಮೇಲೆ ಇರುವ ಪವರ್ ಅದೇ ಅಧಿಕಾರ.

ನೀವು ನನ್ನ ಅಪ್ಪನೋ ಅಮ್ಮನೋ ಆಗಿದ್ದರೆ ನಿಮಗೆ ನನ್ನ ಮೇಲೆ ಹಕ್ಕು ಇರುತ್ತದೆ, ಅಧಿಕಾರ ಇರುತ್ತದೆ, ಅಲ್ಲವೇ? ಒಬ್ಬರು ಇನ್ನೊಬ್ಬರನ್ನು ಕಸದಂತೆ ಕಾಣುವ ಹಕ್ಕು ಇದೆಯೇ? ಅಧಿಕಾರವನ್ನು ಸೃಷ್ಟಿಸುವುದು ಏನು? ಯಾರು?

ತೀರ ಸ್ಪಷ್ಟವಾಗಿರುವ ಮೊದಲನೆಯ ಸಂಗತಿ ಇದು. ನಮ್ಮಲ್ಲಿ ಪ್ರತಿಯೊಬ್ಬರಿಗೂ ಸುರಕ್ಷಿತವಾದ ವರ್ತನೆ ಯಾವುದು ಎಂದು ಕಂಡುಕೊಳ್ಳುವ ಆಸೆ ಇರುತ್ತದೆ. ನಾವೇನು ಮಾಡಬೇಕೆಂದು ಯಾರಾದರೂ ಹೇಳಲಿ ಎಂದು

ನಾವು ಬಯಸುತ್ತೇವೆ. ನಮ್ಮೊಳಗೆ ಗೊಂದಲ, ಕಳವಳ ತುಂಬಿರುವಾಗ, ಏನು ಮಾಡಬೇಕೆಂದು ನಮಗೆ ತಿಳಿಯದೆ ಇರುವಾಗ ಗುರುವಿನ ಬಳಿಗೋ, ಶಿಕ್ಷಕರ ಬಳಿಗೋ, ಅಪ್ಪ ಅಮ್ಮಂದಿರ ಬಳಿಗೋ, ಅಥವ ಇನ್ನಾರ ಬಳಿಗೋ ಹೋಗುತ್ತೇವೆ. ನಮ್ಮೊಳಗಿನ ಗೊಂದಲದಿಂದ ಪಾರಾಗುವ ದಾರಿಯನ್ನು ಅವರು ತೋರಿಸಿಯಾರು ಎಂದು ತಿಳಿಯುತ್ತೇವೆ. ನಮಗಿಂತ ಚೆನ್ನಾಗಿ ಅವರಿಗೆ ಗೊತ್ತಿದೆ ಎಂದೇ ಭಾವಿಸಿಕೊಂಡು ನಾವು ಗುರುವಿನ ಬಳಿಗೆ, ತಿಳಿದವರ ಬಳಿಗೆ ಹೋಗಿ ನಾವೇನು ಮಾಡಬೇಕು? ಎಂದು ಕೇಳುತ್ತೇವೆ. ಅಂದರೆ ಹೇಗೆ ಬದುಕಬೇಕು, ಏನು ಮಾಡಬೇಕು ಎಂದು ನಿರ್ದಿಷ್ಟವಾದ ಒಂದು ದಾರಿಯನ್ನು ಅರಿಯಬೇಕು ಎಂಬ ನಮ್ಮ ಆಸೆಯೇ ಅಧಿಕಾರವನ್ನು ಸೃಷ್ಟಿಸುತ್ತದೆ, ಅಲ್ಲವೇ?

ಉದಾಹರಣೆಗೆ, ನಾನೊಬ್ಬ ಗುರುವಿನ ಬಳಿಗೆ ಹೋಗುತ್ತೇನೆ ಎಂದಿಟ್ಟುಕೊಳ್ಳಿ. ಏಕೆ? ಆ ಗುರು ಒಬ್ಬ ಮಹಾತ್ಮ, ಸತ್ಯವನ್ನು ಬಲ್ಲವನು, ದೇವರನ್ನು ಕಂಡವನು, ನನ್ನ ಮನಸ್ಸಿಗೆ ನೆಮ್ಮದಿ ತಂದುಕೊಡಬಲ್ಲವನು ಎಂದು ನಾನು ಭಾವಿಸಿಕೊಂಡಿರುತ್ತೇನೆ. ಈ ಎಲ್ಲ ಸಂಗತಿಗಳ ಬಗ್ಗೆ ನನಗೇನೂ ತಿಳಿದಿಲ್ಲ, ಆದ್ದರಿಂದಲೇ ಗುರುವಿನ ಬಳಿಗೆ ಹೋಗುತ್ತೇನೆ. ಗುರುವಿಗೆ ನಮಸ್ಕರಿಸಿ, ಹೂ ಹಣ್ಣುಗಳನ್ನು ನೀಡಿ ನನ್ನ ಭಕ್ತಿಯನ್ನು ಸಮರ್ಪಿಸುತ್ತೇನೆ. ಗುರು ನನಗೆ ನೆಮ್ಮದಿಯನ್ನು ಕೊಡಬೇಕು, ನಾನೇನು ಮಾಡಬೇಕೆಂದು ತಿಳಿಸಬೇಕು, ಎಂಬ ಆಸೆ ನನ್ನೊಳಗಿರುತ್ತದೆ. ಆದ್ದರಿಂದಲೇ ಗುರುವಿಗೆ ನನ್ನ ಮನಸ್ಸಿನೊಳಗೇ ಅಧಿಕಾರಸ್ಥಾನವನ್ನು ಕೊಟ್ಟಿರುತ್ತೇನೆ. ಗುರುವಿನ ಅಧಿಕಾರವನ್ನು ನಾನೇ ಸೃಷ್ಟಿಸಿರುತ್ತೇನೆ. ಅಧಿಕಾರದ ಸೃಷ್ಟಿ ಎಂಬುದು ನನ್ನಿಂದಾಚೆಗೆ ಎಲ್ಲೋ ಹೊರಗೆ ಉಂಟಾಗುವಂಥದಲ್ಲ.

ನೀವು ಚಿಕ್ಕವರಾಗಿರುವಾಗ ನಿಮಗೇನೂ ಗೊತ್ತಿಲ್ಲ ಎಂದು ಶಿಕ್ಷಕರು ನಿಮಗೆ ತೋರಿಸಿಕೊಡುತ್ತಿರುತ್ತಾರೆ. ಶಿಕ್ಷಕರು ನಿಜವಾಗಿ ವಿವೇಕಿಗಳಾಗಿದ್ದರೆ ನೀವೂ ವಿವೇಕಿಗಳಾಗಿ ಬೆಳೆಯುವಂತೆ ನಿಮಗೆ ಸಹಾಯ ಮಾಡುತ್ತಾರೆ. ನೀವು ಶಿಕ್ಷಕನ ಅಥವ ಬೇರೆಯ ಅಧಿಕಾರ ಕೇಂದ್ರಗಳನ್ನು ಹುಡುಕಿಕೊಂಡು ಹೋಗದೆ ನಿಮ್ಮೊಳಗಿನ ಗೊಂದಲವನ್ನು ನೀವೇ ಅರ್ಥಮಾಡಿಕೊಳ್ಳುವುದಕ್ಕೆ ನೆರವು ನೀಡುತ್ತಾರೆ.

ಹೊರಗಿನ ಅಧಿಕಾರಗಳು ಕೆಲವಿವೆ. ರಾಜ್ಯ, ಕಾನೂನು, ಪೋಲೀಸು ಇತ್ಯಾದಿ. ನಾವು ಕಾಪಾಡಿಕೊಳ್ಳಲು ಬಯಸುವ ಆಸ್ತಿ ನಮ್ಮಲ್ಲಿರುವುದರಿಂದಲೇ ಈ ಹೊರಗಿನ ಅಧಿಕಾರಗಳನ್ನು ಸೃಷ್ಟಿಸಿಕೊಂಡಿದ್ದೇವೆ. ನಮ್ಮ ಆಸ್ತಿ ನಮ್ಮದೇ. ಬೇರೆ ಯಾರೂ ಅದನ್ನು ಬಳಸಬಾರದು. ಆದ್ದರಿಂದಲೇ ನಮ್ಮ ಆಸ್ತಿಯನ್ನು ಕಾಪಾಡುವುದಕ್ಕೆ ಸರ್ಕಾರವನ್ನು ಸೃಷ್ಟಿಸುತ್ತೇವೆ. ಹೀಗೆ ಸರ್ಕಾರಕ್ಕೆ ಅಧಿಕಾರ ಪ್ರಾಪ್ತವಾಗುತ್ತದೆ. ನಮ್ಮನ್ನು, ನಮ್ಮ ಆಸ್ತಿಯನ್ನು, ನಮ್ಮ ಬದುಕಿನ ವಿಧಾನವನ್ನು, ನಮ್ಮ ಆಲೋಚನೆಯ ವಿಧಾನಗಳನ್ನು ಕಾಪಾಡಲೆಂದು ನಾವೇ

ಸೃಷ್ಟಿಸಿಕೊಂಡಿರುವ ಅಧಿಕಾರದ ಕೇಂದ್ರವೇ ಸರ್ಕಾರ. ನನ್ನನ್ನು ಮತ್ತು ನನ್ನದನ್ನು ಕಾಪಾಡಲೆಂದು ಅನೇಕ ಶತಮಾನಗಳ ಅವಧಿಯಲ್ಲಿ ನಾವು ಕಾನೂನಿನ ವ್ಯವಸ್ಥೆಯನ್ನು ಸೃಷ್ಟಿಸಿಕೊಂಡಿದ್ದೇವೆ, ರಾಜ್ಯ, ಸರ್ಕಾರ, ಪೋಲೀಸು, ಸೈನ್ಯಗಳನ್ನು ಸೃಷ್ಟಿಸಿಕೊಂಡಿದ್ದೇವೆ.

ಇದರಂತೆಯೇ ನಮ್ಮ ಅಂತರಂಗಕ್ಕೆ ಸಂಬಂಧಿಸಿದ ಅಧಿಕಾರ ಕೇಂದ್ರಗಳೂ ಇವೆ. ವಿಚಾರಗಳ ಅಧಿಕಾರ ಅಂಥದ್ದು. ಅದು ಹೊರಗಿನದಲ್ಲ, ಒಳಗಿನ ಅಧಿಕಾರ. ನಾನು ಒಳ್ಳೆಯವನಾಗಿರಬೇಕು, ನಾನು ಅಸೂಯೆ ಪಡಬಾರದು, ಎಲ್ಲರನ್ನೂ ಸೋದರರಂತೆ ಕಾಣಬೇಕು ಎಂದೆಲ್ಲ ಹೇಳಿಕೊಳ್ಳುವಾಗ ನಮ್ಮ ಮನಸ್ಸಿನೊಳಗೇ ವಿಚಾರಗಳ ಅಧಿಕಾರವನ್ನು ಸೃಷ್ಟಿಸಿಕೊಂಡಿರುತ್ತೇವೆ, ಅಲ್ಲವೇ? ನಾನು ಕುತಂತ್ರಿ. ಮೂರ್ಖ, ಹಿಂಸಕ, ಎಲ್ಲವೂ ನನಗೆ ಮಾತ್ರವೇ ಸಿಗಬೇಕೆಂದು ಬಯಸುವವನು, ಅಧಿಕಾರವನ್ನು ಅಪೇಕ್ಷಿಸುವವನು ಆಗಿದ್ದೇನೆಂದಿಟ್ಟುಕೊಳ್ಳಿ. ಆಗೇನಾಗುತ್ತದೆ. ನಾನು ಹಾಗಿರುವುದೇ ವಾಸ್ತವ, ಅದೇ ಸತ್ಯ. ಆದರೆ ಧರ್ಮಿಷ್ಠರು ಹೇಳಿದ್ದಾರೆಂದು ನಾನು ಎಲ್ಲರನ್ನೂ ಸೋದರರಂತೆ ಭಾವಿಸಬೇಕು ಎಂದುಕೊಳ್ಳುತ್ತೇನೆ. ಸೋದರರಂತೆ ಇತರರನ್ನು ಕಾಣುವುದು ಲಾಭಕರವಾದ್ದರಿಂದ, ಸೋದರತೆಯನ್ನು ಒಂದು ಆದರ್ಶವಾಗಿ ರೂಪಿಸಿಕೊಳ್ಳುತ್ತೇನೆ. ನನ್ನಲ್ಲಿ ನಿಜವಾಗಿ ಸೋದರತೆಯ ಭಾವನೆ ಇಲ್ಲ, ಆದರೂ ಅನೇಕ ಕಾರಣಗಳಿಂದ ನಾನು ಎಲ್ಲರ ಸೋದರ ಎಂಬಂತೆ ತೋರ್ಪಡಿಸಿಕೊಳ್ಳಬೇಕು, ಇರಬೇಕು. ಹೀಗೆ ಆದರ್ಶವೇ ನನ್ನನ್ನು ನಿಯಂತ್ರಿಸುವ ಒಂದು ಅಧಿಕಾರ ಕೇಂದ್ರವಾಗುತ್ತದೆ.

ಆ ಆದರ್ಶಕ್ಕೆ ಅನುಗುಣವಾಗಿ ಬದುಕಬೇಕೆಂದು ನನ್ನನ್ನೇ ನಾನು ಶಿಸ್ತಿಗೆ ಒಳಪಡಿಸಿಕೊಳ್ಳುತ್ತೇನೆ. ನನ್ನ ಕೋಟಿಗಿಂತ ಚೆನ್ನಾಗಿರುವ ಕೋಟು ನಿಮ್ಮ ಬಳಿ ಇದೆ, ನನ್ನ ಬಳಿ ಇರುವುದಕ್ಕಿಂತ ಜಾಸ್ತಿ ಸೀರೆಗಳು ನಿಮ್ಮ ಬಳಿ ಇವೆ, ನನಗೆ ಸಿಗುತ್ತಿರುವುದಕ್ಕಿಂತ ನಿಮಗೆ ಜಾಸ್ತಿ ಗೌರವ ಸಿಗುತ್ತಿದೆ. ಇದರಿಂದೆಲ್ಲ ನನ್ನೊಳಗೆ ಅಸೂಯೆ ಹುಟ್ಟುತ್ತದೆ. ಆದರೆ ನನ್ನೊಳಗೆ ಅಸೂಯೆ ಇರಬಾರದು. ನಾನು ನಿಮ್ಮ ಬಗ್ಗೆ ಸೋದರತ್ವವನ್ನು ಇಟ್ಟುಕೊಳ್ಳಬೇಕು ಎಂದು ನನಗೆ ನಾನೇ ಹೇಳಿಕೊಳ್ಳುತ್ತೇನೆ. ನನ್ನ ಆದರ್ಶವೇ ನನ್ನನ್ನು ನಿಯಂತ್ರಿಸುವ ಅಧಿಕಾರವಾಗಿಬಿಡುತ್ತದೆ. ನನ್ನ ಆದರ್ಶಕ್ಕೆ ಅನುಗುಣವಾಗಿ ಬದುಕಲು ಪ್ರಯತ್ನಪಡಲು ತೊಡಗುತ್ತೇನೆ. ಇದರಿಂದೇನಾಗುತ್ತದೆ? ನಾನು ನಿಜವಾಗಿ ಏನಾಗಿದ್ದೇನೆಯೋ ಅದಕ್ಕೂ, ನಾನು ಹೇಗೆ ಇರಬೇಕೆಂದು ಬಯಸುತ್ತೇನೆಯೋ ಅದಕ್ಕೂ ನಡುವೆ ನಿರಂತರವಾದ ಸಂಘರ್ಷ ಶುರುವಾಗುತ್ತದೆ. ನನ್ನನ್ನೆ ನಾನು ಶಿಸ್ತಿಗೊಳಪಡಿಸಿಕೊಳ್ಳುತ್ತೇನೆ. ರಾಜ್ಯಾಧಿಕಾರವೂ ನನ್ನನ್ನು ಶಿಸ್ತಿಗೆ ಒಳಪಡಿಸುತ್ತದೆ. ಕಮ್ಯುನಿಸ್ಟ್, ಬಂಡವಾಳಶಾಹಿ, ಸಮಾಜವಾದಿ ಯಾವುದೇ ರಾಜ್ಯವಾಗಿರಲಿ ನಾನು ಹೇಗೆ ವರ್ತಿಸಬೇಕು ಎಂಬ ಬಗ್ಗೆ ರಾಜ್ಯಾಧಿಕಾರಕ್ಕೆ ತನ್ನದೇ

ವಿಚಾರಗಳಿರುತ್ತವೆ. ರಾಜ್ಯವೇ ಅತ್ಯಂತ ಮುಖ್ಯವಾದದ್ದು ಎಂದು ಹೇಳುವವರಿದ್ದಾರೆ. ನಾನು ಅಂಥ ರಾಜ್ಯದಲ್ಲಿ ವಾಸಿಸುತ್ತಿದ್ದರೆ ರಾಜ್ಯದ ಅಧಿಕೃತ ವಿಚಾರ ಪ್ರಣಾಳಿಗೆ ತಕ್ಕಂತೆಯೇ ಬದುಕಬೇಕು. ಅಂದರೆ ರಾಜ್ಯವು ನನ್ನನ್ನು ಬಲವಂತಕ್ಕೆ ಒಳಪಡಿಸುತ್ತಾ ಇರುತ್ತದೆ. ಅಂದರೆ ರಾಜ್ಯವನ್ನು ನಿಯಂತ್ರಿಸುವ ಕೆಲವರು ನನ್ನ ವರ್ತನೆಯನ್ನೂ ನಿಯಂತ್ರಿಸುತ್ತಾ ಇರುತ್ತಾರೆ.

ನಮ್ಮೊಳಗೆ ಎರಡು ಭಾಗಗಳಿರುತ್ತವೆ-ಒಂದು ಎಚ್ಚರದ ಭಾಗ, ಇನ್ನೊಂದು ಸುಪ್ತವಾದ ಭಾಗ. ಹೀಗೆಂದರೇನು, ನಿಮಗೆ ತಿಳಿಯಿತೆ? ನೀವು ಗೆಳೆಯರೊಡನೆ ಮಾತನಾಡಿಕೊಂಡು ರಸ್ತೆಯಲ್ಲಿ ವಾಕ್ ಹೋಗುತ್ತಿದ್ದೀರಿ, ಎಂದಿಟ್ಟುಕೊಳ್ಳಿ. ನಿಮ್ಮ ಮನಸ್ಸಿನ ಎಚ್ಚರವಾಗಿರುವ ಭಾಗ ಮಾತುಕತೆಯ ಬಗ್ಗೆ ಗಮನವಿಟ್ಟು ಅದರಲ್ಲೇ ತೊಡಗಿಕೊಂಡಿರುತ್ತದೆ. ನಿಮ್ಮ ಮನಸ್ಸಿನ ಇನ್ನೊಂದು ಭಾಗವಿರುತ್ತದೆ. ಅದು ಸುಪ್ತವಾಗಿದ್ದು ಮರ, ಎಲೆಗಳು, ಹಕ್ಕಿ, ನೀರಿನ ಮೇಲೆ ಬಿದ್ದಿರುವ ಬಿಸಿಲು ಇತ್ಯಾದಿ ಎಣಿಸಲಾಗದಷ್ಟು ಸಂಗತಿಗಳ, ವಸ್ತುಗಳ ಚಿತ್ರ-ಭಾವಗಳನ್ನು ತನ್ನಲ್ಲಿ ಮೂಡಿಸಿಕೊಳ್ಳುತ್ತಿರುತ್ತದೆ. ನಿಮ್ಮ ಎಚ್ಚರದ ಮನಸ್ಸು ಏನೇನೋ ಕೆಲಸಗಳಲ್ಲಿ ಮಗ್ನವಾಗಿದ್ದರೂ ಹೊರಗಿನ ಲೋಕ ಸುಪ್ತ ಮನಸ್ಸಿನ ಮೇಲೆ ಸದಾ ಕಾಲವೂ ಮುದ್ರಿತವಾಗುತ್ತಲೇ ಇರುತ್ತದೆ. ಸುಪ್ತಮನಸ್ಸು ಏನೇನನ್ನು ಹೀರಿಕೊಳ್ಳುತ್ತದೋ ಅದು ಎಚ್ಚರದ ಮನಸ್ಸು ತಿಳಿದುಕೊಳ್ಳುವ ಸಂಗತಿಗಳಿಗಿಂತ ಬಹಳ ಮುಖ್ಯವಾದದ್ದು. ಸುಪ್ತಮನಸ್ಸಿಗೆ ಹೋಲಿಸಿದರೆ ಎಚ್ಚರದ ಮನಸ್ಸು ಹೀರಿಕೊಳ್ಳಬಹುದಾದದ್ದು ಬಹಳ ಕಡಮೆ. ಶಾಲೆಯಲ್ಲಿ ಕಲಿಸಿದ್ದನ್ನು ಎಚ್ಚರದ ಮನಸ್ಸು ಹೀರಿಕೊಳ್ಳುತ್ತದೆ. ಹಾಗೆ ಶಾಲೆಯಲ್ಲಿ ಕಲಿಯುವುದು ನಿಜವಾಗಿ ಬಹಳ ಸ್ವಲ್ಪ. ಎಚ್ಚರದ ಮನಸ್ಸು ಹೀರಿಕೊಳ್ಳುವ ಮಾಹಿತಿಗಿಂತ ನಿಮ್ಮ ಸುಪ್ತಮನಸ್ಸು ನಿಮ್ಮ ಮತ್ತು ಶಿಕ್ಷಕರೊಡನೆ, ನಿಮ್ಮ ಮತ್ತು ಅಪ್ಪ ಅಮ್ಮಂದಿರೊಡನೆ, ನಿಮ್ಮ ಮತ್ತು ನಿಮ್ಮ ಗೆಳೆಯರೊಡನೆ ನಡೆಯುವ ವ್ಯವಹಾರಗಳ ಬಗ್ಗೆ ಚಿತ್ರ-ಭಾವಗಳನ್ನು ಮೂಡಿಸಿಕೊಳ್ಳುತ್ತಿರುತ್ತದೆ. ಇದು ಒಳಗೇ, ಆಳದಲ್ಲಿ ನಡೆಯುವ ಕೆಲಸ. ಇದು ಎಚ್ಚರದ ಮನಸ್ಸು ಏನೇನನ್ನು ತಿಳಿಯುತ್ತದೆಯೋ ಅದಕ್ಕಿಂತ ಬಹಳ ಮುಖ್ಯ. ಹಾಗೆಯೇ ನಾವು ದಿನವೂ ಬೆಳಗಿನ ಹೊತ್ತು ಮಾತನಾಡುತ್ತಿದ್ದೇವಲ್ಲ, ಅದನ್ನು ಕೂಡ ನಿಮ್ಮ ಸುಪ್ತಮನಸ್ಸು ಹೀರಿಕೊಳ್ಳುತ್ತಿರುತ್ತದೆ. ಆಮೇಲೆ ದಿನದಲ್ಲಿ ಯಾವಾಗಲೋ ಒಮ್ಮೆ, ಅಥವ ಮುಂದಿನ ವಾರಗಳಲ್ಲಿ, ಇಲ್ಲಿ ಕೇಳಿಸಿಕೊಂಡ ಯಾವುದೋ ಮಾತು ತಟ್ಟನೆ ನಿಮ್ಮ ನೆನಪಿಗೆ ಬರುತ್ತದೆ. ಅದು ಎಚ್ಚರದ ಮನಸ್ಸು ಕೇಳಿಸಿಕೊಂಡ ಸಂಗತಿಗಿಂತ ಹೆಚ್ಚಿನ ಪರಿಣಾಮವನ್ನು ನಿಮ್ಮ ಮೇಲೆ ಮಾಡುತ್ತದೆ.

ಇರಲಿ. ಮತ್ತೆ ನಮ್ಮ ವಿಷಯಕ್ಕೆ ಬರೋಣ. ರಾಜ್ಯದ ಅಧಿಕಾರ, ಪೋಲೀಸರ ಅಧಿಕಾರ, ಆದರ್ಶದ ಮತ್ತು ವಿಚಾರಗಳ ಅಧಿಕಾರ, ಸಂಪ್ರದಾಯದ ಅಧಿಕಾರ ಇವೆಲ್ಲ ಅಧಿಕಾರಗಳನ್ನು ನಾವೇ ಸೃಷ್ಟಿಸುತ್ತೇವೆ. ನೀವು ಏನೋ

ಮಾಡಬೇಕೆಂದು ನಿಮಗನ್ನಿಸುತ್ತದೆ. ಅಪ್ಪ ಮಾಡಬೇಡ ಎನ್ನುತ್ತಾರೆ. ನೀವು ಅಪ್ಪನ ಮಾತು ಕೇಳಬೇಕು. ಇಲ್ಲದಿದ್ದರೆ ಅಪ್ಪನಿಗೆ ಸಿಟ್ಟು ಬರುತ್ತದೆ. ನಿಮ್ಮ ಊಟ, ತಿಂಡಿ, ಬಟ್ಟೆ ಬರೆ ಎಲ್ಲಕ್ಕೂ ಅಪ್ಪನನ್ನೇ ಅವಲಂಬಿಸಿದ್ದೀರಿ. ಆದ್ದರಿಂದಲೇ ಅಪ್ಪನ ಬಗ್ಗೆ ನಿಮಗೆ ಭಯ ಇದೆ. ನಿಮ್ಮಲ್ಲಿರುವ ಭಯದ ಮೂಲಕ ಅಪ್ಪ ನಿಮ್ಮನ್ನು ನಿಯಂತ್ರಿಸುತ್ತಾರೆ, ಅಲ್ಲವೇ? ಹೀಗಾಗಿ ಅಪ್ಪ ಅಥಾರಿಟಿ ಆಗುತ್ತಾರೆ. ಹೀಗೆಯೇ ಪರಂಪರೆ ಕೂಡ ನಿಮ್ಮನ್ನು ನಿಯಂತ್ರಿಸುತ್ತದೆ. ನೀವು ಹೀಗೆ ಮಾಡಬೇಕು, ಹಾಗೆ ಮಾಡಬಾರದು, ಸೀರೆಯನ್ನು ಹೀಗೆ ಉಡಬೇಕು, ಹುಡುಗರೊಡನೆ ಮಾತನಾಡಬಾರದು, ಹುಡುಗಿಯರ ಮೈ ಮುಟ್ಟಬಾರದು, ಇತ್ಯಾದಿ. ಏನು ಮಾಡಬೇಕು, ಹೇಗೆ ಮಾಡಬೇಕು ಎಂಬುದನ್ನು ಪರಂಪರೆ ನಿಮಗೆ ಹೇಳುತ್ತಿರುತ್ತದೆ. ಪರಂಪರೆ ಎಂದರೆ ಜ್ಞಾನವೇ ಅಲ್ಲವೇ? ನೀವು ಏನು ಮಾಡಬೇಕು ಎಂದು ಹೇಳುವ ಪುಸ್ತಕಗಳಿವೆ. ನೀವು ಏನು ಮಾಡಬೇಕೆಂದು ರಾಜ್ಯ ಹೇಳುತ್ತದೆ. ನೀವು ಏನು ಮಾಡಬೇಕೆಂದು ನಿಮ್ಮ ಅಪ್ಪ, ಅಮ್ಮ ಹೇಳುತ್ತಾರೆ. ಸಮಾಜ ಮತ್ತು ಧರ್ಮ ನೀವು ಏನು ಮಾಡಬೇಕೆಂದು ಹೇಳುತ್ತವೆ. ಇದರಿಂದೆಲ್ಲ ನಿಮಗೇನಾಗುತ್ತದೆ? ನಜ್ಜುಗುಜ್ಜಾಗುತ್ತೀರಿ, ಒಳಗೇ ಮುರಿದುಹೋಗುತ್ತೀರಿ. ನೀವು ಜೀವಂತವಾಗಿ ಯೋಚಿಸುವುದಾಗಲೀ, ಕ್ರಿಯೆಯಲ್ಲಿ ತೊಡಗುವುದಾಗಲೀ ಸಾಧ್ಯವಾಗುವುದೇ ಇಲ್ಲ. ರಾಜ್ಯ, ಅಪ್ಪ, ಅಮ್ಮ, ಧರ್ಮ, ಪರಂಪರೆ, ಸಮಾಜ ಇವೆಲ್ಲದರ ಬಗ್ಗೆ ಭಯಗೊಳ್ಳುತ್ತೀರಿ. ನಾನು ವಿಧೇಯವಾಗಿರಬೇಕು, ಇಲ್ಲದಿದ್ದರೆ ಅಸಹಾಯಕನಾಗಿಬಿಡುತ್ತೇನೆ ಎನ್ನತೊಡಗುವಿರಿ. ಅಂದರೇನಾಯಿತು? ಕ್ಷೇಮಕರವಾದ ವರ್ತನೆ, ಕ್ಷೇಮಕರವಾದ ಬದುಕಿನ ವಿಧಾನಗಳನ್ನು ಹುಡುಕುತ್ತಾ ನೀವೇ ಅಧಿಕಾರದ ಕೇಂದ್ರಗಳನ್ನು ಸೃಷ್ಟಿಸುತ್ತೀರಿ. ಆದ್ದರಿಂದಲೇ ನೀವು ಆಲೋಚಿಸುವ, ಸೃಷ್ಟಿಸುವ ಸಾಮರ್ಥ್ಯವಿಲ್ಲದ ಗುಲಾಮರಾಗುತ್ತೀರಿ, ಯಂತ್ರದ ಭಾಗವಾಗುತ್ತೀರಿ.

ನೀವು ಚಿತ್ರ ಬರೆಯುತ್ತೀರೋ ಇಲ್ಲವೋ ನನಗೆ ಗೊತ್ತಿಲ್ಲ. ಚಿತ್ರ ಹೇಗೆ ಬರೆಯಬೇಕು, ಬಣ್ಣ ಹೇಗೆ ಹಾಕಬೇಕು ಎಂದು ನಿಮ್ಮ ಡ್ರಾಯಿಂಗ್ ಮಾಸ್ತರು ಹೇಳಿಕೊಡುತ್ತಾರೆ. ಮರವನ್ನು ನೋಡುತ್ತಾ ಅದನ್ನು ಕಾಪಿ ಮಾಡುತ್ತೀರಿ. ಆದರೆ ಮರದ ಚಿತ್ರವನ್ನು ಬರೆಯುವುದೆಂದರೆ ಮರವನ್ನು ನೋಡುವುದು, ಮರದ ಬಗ್ಗೆ ನಿಮ್ಮಲ್ಲಿ ಮೂಡುವ ಭಾವನೆಗಳನ್ನು ಹಾಳೆಯ ಮೇಲೆ ಮೂಡಿಸುವುದು, ಮರದ ವಿಶಿಷ್ಟತೆಯನ್ನು, ಹೇಗೆ ಎಲೆಗಳ ನಡುವೆ ಪಿಸುಗುಡುತ್ತಾ ಗಾಳಿ ಸುಳಿಯುತ್ತದೆ, ಮರದ ಮೇಲೆ ಬಿದ್ದಿರುವ ಬೆಳಕು ನೆರಳಿನ ವಿನ್ಯಾಸ ಹೇಗಿದೆ, ಎಂಬುದನ್ನೆಲ್ಲ ಮೂಡಿಸುವುದೆಂದೇ ಅರ್ಥ. ಹೀಗೆಲ್ಲ ಮಾಡಬೇಕಾದರೆ ನೀವು ಬಹಳ ಸೂಕ್ಷ್ಮವಾಗಿರಬೇಕು, ನಿಮ್ಮಲ್ಲಿ ಸಂವೇದನೆಗಳಿರಬೇಕು. ಆದರೆ ನೀವು ಭಯಗೊಂಡಿದ್ದು, ನಾನು ಇದನ್ನು ಮಾಡಬೇಕು, ಅದನ್ನು ಮಾಡಬೇಕು, ಅಪ್ಪ ಏನನ್ನುತ್ತಾರೆ, ಜನ ಏನನ್ನುತ್ತಾರೆ ಎಂದು ಯೋಚಿಸುತ್ತಿದ್ದರೆ ಯಾವುದರ ಬಗೆಗೂ ಸೂಕ್ಷ್ಮವಾದ ಸಂವೇದನೆ

ಸಾಧ್ಯವಾಗುವುದಿಲ್ಲ. ಅಧಿಕಾರವು ಚೆಲುವಾದದ್ದರ ಬಗ್ಗೆ ಇರುವ ಸೂಕ್ಷ್ಮವಾದ ಸಂವೇದನೆಯನ್ನು ನಿಧಾನವಾಗಿ ನಾಶಮಾಡಿಬಿಡುತ್ತದೆ.

ಆದರಿಂದಲೇ ನಮ್ಮ ಶಾಲೆಯಂಥ ಶಾಲೆಗಳಲ್ಲಿ ನಿಮ್ಮನ್ನು ಶಿಸ್ತಿಗೆ ಒಳಪಡಿಸಬೇಕೋ ಬೇಡವೋ ಎಂಬುದು ಸಮಸ್ಯೆಯಾಗಿಬಿಡುತ್ತದೆ. ನಿಜವಾದ ಶಿಕ್ಷಕರು ಎದುರಿಸುವ ಸಮಸ್ಯೆಯನ್ನು ನೋಡಿ. ನೀವು ತುಂಟ ಹುಡುಗನೋ ಹುಡುಗಿಯೋ ಆಗಿರುತ್ತೀರಿ. ಶಿಕ್ಷಕನಾಗಿ ನಾನು ನಿಮ್ಮನ್ನು ಶಿಸ್ತಿಗೆ ಒಳಪಡಿಸಬೇಕೋ ಬೇಡವೋ? ನಿಮ್ಮನ್ನು ಶಿಸ್ತಿಗೆ ಒಳಪಡಿಸಿದರೆ ಏನಾಗುತ್ತದೆ? ನಾನು ದೇಹದಲ್ಲಿ, ವಯಸ್ಸಿನಲ್ಲಿ ನಿಮಗಿಂತ ದೊಡ್ಡವನು, ನನಗೆ ಶಿಕ್ಷಕನೆಂಬ ಅಧಿಕಾರ ಇತ್ಯಾದಿಗಳೆಲ್ಲ ಇವೆ. ಕೆಲವು ಬಗೆಯ ಕೆಲಸಗಳನ್ನು ಮಾಡಬೇಕೆಂದೇ ನನಗೆ ಸಂಬಳಕೊಡುತ್ತಿದ್ದಾರೆ. ನೀವು ಶಿಸ್ತಿನಿಂದ ಇರಬೇಕೆಂದು ಬಲವಂತಪಡಿಸುತ್ತೇನೆ. ಹೀಗೆ ಮಾಡುತ್ತಾ ನಿಮ್ಮ ಮನಸ್ಸು ಹೆಳವ ಮನಸ್ಸು ಆಗುವಂತೆ ಮಾಡುತ್ತಿಲ್ಲವೇ ನಾನು? ನಿಮ್ಮ ವಿವೇಕವನ್ನು ನಾಶಮಾಡಲು ತೊಡಗಿಲ್ಲವೇ ನಾನು? ನಾನು ಯಾವುದನ್ನು ಸರಿ ಎಂದು ಭಾವಿಸುತ್ತೇನೆಯೋ ಅದನ್ನೇ ನೀವು ಮಾಡಬೇಕೆಂದು ಒತ್ತಾಯಿಸುತ್ತಾ ನಿಮ್ಮನ್ನು ಮೂರ್ಖರನ್ನಾಗಿಸುತ್ತಿಲ್ಲವೇ? ಮತ್ತೆ ನೋಡಿ, ಹೊರ ನೋಟಕ್ಕೆ ನೀವು ಎಷ್ಟೇ ಆಕ್ಷೇಪಣೆ ಎತ್ತಿದರೂ ಶಿಸ್ತಿಗೆ ಒಳಪಡಲು, ಬಲವಂತ ಮಾಡಿಸಿಕೊಳ್ಳಲು ನಿಮಗೆ ಇಷ್ಟ ಇರುತ್ತದೆ. ಶಿಸ್ತಿಗೆ ಒಳಪಡುವುದರಿಂದ ನೀವು ಸುರಕ್ಷಿತರು ಎಂಬ ಭಾವ ನಿಮ್ಮಲ್ಲಿ ಮೂಡುತ್ತದೆ. ಹೀಗೆ ವರ್ತಿಸಿ ಎಂದು ನಿಮ್ಮನ್ನು ಯಾರೂ ಬಲವಂತ ಮಾಡದಿದ್ದರೆ ಕೆಟ್ಟಹುಡುಗರಾಗಿಬಿಡುತ್ತೇವೆ ಎಂಬ ಭಯ ನಿಮಗಿದೆ. ನಾವು ತಪ್ಪು ಮಾಡಿಬಿಡುತ್ತೇವೆ ಎಂಬ ಭಯ ಇದೆ. ದಯವಿಟ್ಟು ನನ್ನನ್ನು ಶಿಸ್ತಿಗೆ ಒಳಪಡಿಸಿ, ಸರಿಯಾಗಿ ವರ್ತಿಸುವುದನ್ನು ಕಲಿಸಿ ಎಂದು ನೀವು ಬೇಡುತ್ತಿರುತ್ತೀರಿ.

ಶಿಕ್ಷಕನಾಗಿ ನಾನು ನಿಮ್ಮ ಮೇಲೆ ಶಿಸ್ತನ್ನು ಹೇರಬೇಕೆ ಅಥವಾ ನೀವೇಕೆ ತುಂಟತನ ಮಾಡುತ್ತೀರಿ ಎಂಬುದನ್ನು ಅರ್ಥಮಾಡಿಕೊಳ್ಳಬೇಕೆ? ನಿಮ್ಮನ್ನು ಅರ್ಥಮಾಡಿಕೊಳ್ಳಬೇಕೆಂದಿದ್ದರೆ ನಿಮ್ಮ ತಂದೆಯಾಗಿ ಅಥವ ಶಿಕ್ಷಕನಾಗಿ ನನ್ನಲ್ಲಿ ಅಧಿಕಾರಭಾವ ಕಿಂಚಿತ್ತೂ ಇರಬಾರದು. ನೀವೇಕೆ ಕೆಟ್ಟವರಾಗಿದ್ದೀರಿ, ಏಕೆ ಶಾಲೆಯಿಂದ, ಮನೆಯಿಂದ ಓಡಿಹೋಗುತ್ತೀರಿ ಎಂದು ನಿಮಗೆ ಇರುವ ತೊಂದರೆಗಳನ್ನು ನೀವೇ ಅರ್ಥಮಾಡಿಕೊಳ್ಳಲು ನಿಮಗೆ ನಿಜವಾಗಿ ನೆರವು ನೀಡುವ ಬಯಕೆ ನನ್ನಲ್ಲಿರಬೇಕು. ನಿಮ್ಮನ್ನು ನೀವೇ ತಿಳಿದುಕೊಳ್ಳುವಂತಾಗಬೇಕೆಂಬ ಬಯಕೆ ನನ್ನಲ್ಲಿರಬೇಕು. ನನ್ನ ಇಚ್ಛೆಯಂತೆ ನೀವಿರಬೇಕು ಎಂದು ಬಲವಂತಮಾಡುತ್ತಿದ್ದರೆ ನಾನು ನಿಮಗೆ ಸಹಾಯಮಾಡಲಾಗುವುದಿಲ್ಲ. ಶಿಕ್ಷಕನಾಗಿ ನಾನು ನಿಮಗೆ ಸಹಾಯಮಾಡಬೇಕೆಂದಿದ್ದರೆ ತರಗತಿಯಲ್ಲಿ ಕೆಲವೇ ಮಕ್ಕಳಿರಬೇಕು. ಐವತ್ತು ಜನ ಇದ್ದರೆ ಪ್ರತಿಯೊಬ್ಬ ಮಗುವಿಗೂ ನಾನು ಗಮನ ಕೊಡಲು ಸಾಧ್ಯವೇ

ಆಗುವುದಿಲ್ಲ. ಕೆಲವೇ ಮಕ್ಕಳನ್ನು ಗಮನಿಸಿಕೊಳ್ಳುತ್ತಾ, ಅವರು ತಮ್ಮನ್ನು ತಾವೆ ತಿಳಿದುಕೊಳ್ಳುವಂತೆ ನಿಜವಾಗಿ ಸಹಾಯಮಾಡುತ್ತಾ ಇದ್ದರೆ ಸ್ವತಃ ಅವರೇ ಮಾಡಬಹುದಾದ ಕೆಲಸಗಳನ್ನು ಮಾಡುವಂತೆ ಬಲವಂತವಾಗಿ ಶಿಸ್ತನ್ನು ಹೇರುವ ಅಧಿಕಾರ ಕೇಂದ್ರವಾಗುವುದೇ ಇಲ್ಲ ನಾನು.

ಅಧಿಕಾರವು ವಿವೇಕವನ್ನು ಹೇಗೆ ನಾಶಮಾಡುತ್ತದೆ ಎಂದು ನಿಮಗೆ ಅರ್ಥವಾಗುತ್ತಿದೆ ಎಂದುಕೊಂಡಿದ್ದೇನೆ. ನಿಮಗೆ ಸ್ವಾತಂತ್ರ್ಯವಿದ್ದಾಗ ಮಾತ್ರ-ಆಲೋಚಿಸುವ, ಅನುಭವಿಸುವ, ಗಮನಿಸುವ, ಪ್ರಶ್ನಿಸುವ ಸ್ವಾತಂತ್ರ್ಯವಿದ್ದಾಗ ಮಾತ್ರ-ವಿವೇಕವು ಮೂಡುತ್ತದೆ. ಮಕ್ಕಳ ಮೇಲೆ ಬಲವಂತವಾಗಿ ಶಿಸ್ತನ್ನು ಹೇರುತ್ತಿದ್ದರೆ ಅವರನ್ನೂ ನನ್ನಷ್ಟೇ ಮೂರ್ಖರನ್ನಾಗಿ ಮಾಡುತ್ತಿರುತ್ತೇನೆ. ಸಾಮಾನ್ಯವಾಗಿ ಶಾಲೆಗಳಲ್ಲಿ ಆಗುವುದೇ ಹೀಗೆ. ಶಿಕ್ಷಕರು ತಮಗೆ ಎಲ್ಲವೂ ಗೊತ್ತು, ನಿಮಗೇನೂ ಗೊತ್ತಿಲ್ಲ ಎಂದು ಭಾವಿಸಿರುತ್ತಾರೆ. ಆದರೆ ಶಿಕ್ಷಕರಿಗೆ ಗೊತ್ತಿರುವುದಾದರೂ ಏನು? ಒಂದಿಷ್ಟು ಗಣಿತ ಅಥವ ಭೂಗೋಳ, ಬಿಟ್ಟರೆ ಬೇರೆ ಇನ್ನೇನಾದರೂ ಅಲ್ಪಸ್ವಲ್ಪ ಗೊತ್ತಿರಬಹುದು ಅಷ್ಟೇ. ಶಿಕ್ಷಕರು ತಮ್ಮ ಬದುಕಿನ ಬಹುಮುಖ್ಯ ಪ್ರಶ್ನೆಗಳನ್ನೇ ಪರಿಹರಿಸಿಕೊಂಡಿರುವುದಿಲ್ಲ. ಬದುಕಿನ ಬಹುಮುಖ್ಯ ಸಂಗತಿಗಳ ಬಗ್ಗೆ ಪ್ರಶ್ನೆಗಳನ್ನೇ ಕೇಳಿಕೊಂಡಿರುವುದಿಲ್ಲ. ಆದರೂ ಗುಡುಗಿನ ಒಡೆಯ ಇಂದ್ರದೇವನಂತೆ, ಸೈನ್ಯದ ಮುಖ್ಯಸ್ಥನಂತೆ ನಿಮ್ಮ ಮೇಲೆ ಗುಡುಗುತ್ತಿರುತ್ತಾರೆ!

ನಮ್ಮ ಶಾಲೆಯಂಥ ಶಾಲೆಯಲ್ಲಿ ಹೇಳಿದ್ದನ್ನು ಕೇಳುವಂತೆ ಮಾಡುವಂತೆ ಶಿಸ್ತು ಕಲಿಸುವುದಕ್ಕಿಂತ ನಿಮ್ಮನ್ನು ನೀವೇ ಅರ್ಥಮಾಡಿಕೊಳ್ಳುವುದಕ್ಕೆ ನೆರವು ನೀಡುವುದು, ನೀವು ವಿವೇಕಿಗಳೂ ಸ್ವತಂತ್ರರೂ ಆಗಿ ಬದುಕಿನ ಕಷ್ಟಗಳನ್ನು ಭಯವಿಲ್ಲದಂತೆ ಎದುರಿಸುವ ಹಾಗೆ ಬೆಳೆಯಲು ಸಹಾಯ ನೀಡುವುದು ಮುಖ್ಯವಾಗಿರುತ್ತದೆ. ಇದು ಸಾಧ್ಯವಾಗಬೇಕಾದರೆ ಸಮರ್ಥರಾದ ಶಿಕ್ಷಕರು ಬೇಕು. ಕೇವಲ ದುಡ್ಡಿನ ಬಗ್ಗೆ, ತನ್ನ ಹೆಂಡತಿ, ಗಂಡ, ಮಕ್ಕಳ ಬಗ್ಗೆ ಆತಂಕಪಡುವುದಲ್ಲದೆ ನಿಮ್ಮ ಬಗ್ಗೆ ಆಸಕ್ತಿ ಇರುವಂಥ, ಶಿಕ್ಷಕರು ಬೇಕು. ಅಂಥ ಪರಿಸ್ಥಿತಿಯನ್ನು ನಿರ್ಮಿಸುವುದು ಸ್ವತಃ ಶಿಕ್ಷಕರ ಮತ್ತು ನಿಮ್ಮ ಜವಾಬ್ದಾರಿಯಾಗಿರುತ್ತದೆ. ನೀವು ಸುಮ್ಮನೆ ವಿಧೇಯರಾಗಿರಬೇಡಿ, ಸಮಸ್ಯೆಯೊಂದನ್ನು ಕುರಿತು ಆಲೋಚಿಸುವುದನ್ನು ಕಲಿತುಕೊಳ್ಳಿ. ನಮ್ಮ ಅಪ್ಪ ಹೇಳಿದರು, ಅದಕ್ಕೇ ಹೀಗೆ ಇದನ್ನು ಮಾಡುತ್ತಿದ್ದೇನೆ ಎನ್ನಬೇಡಿ. ನೀವು ಹೀಗೆ ಮಾಡಬೇಕೆಂದು ಅಪ್ಪ ಹೇಳಿದ್ದು ಯಾಕೆ, ಇದು ಸರಿ ಇದು ತಪ್ಪು ಎಂದು ಅಪ್ಪ ಹೇಳುವುದು ಯಾಕೆ ಎಂದು ಸ್ವತಃ ಕಂಡುಕೊಳ್ಳಿ. ಅಪ್ಪನನ್ನು ಪ್ರಶ್ನಿಸಿ ತಿಳಿದುಕೊಳ್ಳಿ. ಅದರಿಂದ ನಿಮ್ಮ ವಿವೇಕವನ್ನು ಜಾಗೃತಗೊಳಿಸಿಕೊಳ್ಳುತ್ತೀರಿ, ಅಪ್ಪನ ವಿವೇಕವನ್ನೂ ಜಾಗೃತಗೊಳಿಸುತ್ತೀರಿ.

ಆದರೆ ಅಪ್ಪನನ್ನು ಪ್ರಶ್ನಿಸಿದರೆ ಸಾಮಾನ್ಯವಾಗಿ ಏನಾಗುತ್ತದೆ? ನಿಮ್ಮನ್ನು ಶಿಕ್ಷಿಸಿ ಶಿಸ್ತಿಗೆ ಒಳಪಡಿಸಬಹುದು, ಅಲ್ಲವೇ? ಅಪ್ಪನಿಗೆ ತನ್ನ ಕೆಲಸದ್ದೇ ಚಿಂತೆ, ಕೊಂಚವೂ ಸಮಾಧಾನವಿಲ್ಲ, ನಿಮ್ಮೊಡನೆ ಕುಳಿತು ಮಾತನಾಡುವ, ಬದುಕಿನ ಅಗಾಧ ಸಮಸ್ಯೆಗಳ ಬಗ್ಗೆ, ಜೀವನೋಪಾಯವನ್ನು ಕಂಡುಕೊಳ್ಳುವ ಕಷ್ಟದ ಬಗ್ಗೆ, ಮದುವೆಯಾಗಿ ಸಂಸಾರವನ್ನು ನಡೆಸುವ ತಾಪತ್ರಯದ ಬಗ್ಗೆ ನಿಮಗೆ ತಿಳಿಸಿ ಹೇಳುವ ವ್ಯವಧಾನವಾಗಲಿ, ಪ್ರೀತಿಯಾಗಲೀ ಇಲ್ಲ. ಇದಕ್ಕೆಲ್ಲ ಸಮಯವನ್ನು ಹೊಂದಿಸಿಕೊಳ್ಳುವ ಮನಸ್ಸು ಅಪ್ಪನಿಗೆ ಇಲ್ಲ. ನಿಮ್ಮನ್ನು ದೂರ ತಳ್ಳಿ, ಶಾಲೆಗೆ ಕಳಿಸಿಬಿಡುತ್ತಾನೆ. ಶಾಲೆಯಲ್ಲಿ ಶಿಕ್ಷಕ ಕೂಡ ಅಪ್ಪನಂತೆಯೇ, ಮಿಕ್ಕ ಎಲ್ಲರಂತೆಯೇ, ವ್ಯವಧಾನ, ಪ್ರೀತಿ ಇಲ್ಲದ ವ್ಯಕ್ತಿಯಾಗಿರುತ್ತಾನೆ. ಆದರೆ ವಿವೇಕವು ಬೆಳೆಯುವಂಥ ವಾತಾವರಣವನ್ನು ಸೃಷ್ಟಿಸುವುದು ಶಿಕ್ಷಕರ, ಅಪ್ಪ ಅಮ್ಮಂದಿರ ಮತ್ತು ನಿಮ್ಮ ಜವಾಬ್ದಾರಿ ಕೂಡ ಆಗಿದೆ.

**ಪ್ರಶ್ನೆ:** ವಿವೇಕಿಗಳಾಗುವುದು ಹೇಗೆ?

**ಕೃಷ್ಣಮೂರ್ತಿ:** ಈ ಪ್ರಶ್ನೆಯ ಅರ್ಥವೇನು? ವಿವೇಕಿಯಾಗುವ ವಿಧಾನ ಯಾವುದು, ಉಪಾಯ ಯಾವುದು ಎಂದಲ್ಲವೇ? ಅಂದರೆ, ವಿವೇಕವೆಂದರೇನು ಎಂದು ನಿಮಗೆ ಗೊತ್ತು ಎಂದರ್ಥ. ನೀವು ಯಾವುದಾದರೂ ಸ್ಥಳಕ್ಕೆ ಹೋಗುವುದಿದ್ದರೆ ಅದು ಯಾವುದು ಎಂದು ನಿಮಗೆ ಮೊದಲೇ ಗೊತ್ತಿರುತ್ತದೆ, ದಾರಿಯನ್ನು ಮಾತ್ರ ಕೇಳಬೇಕು ಅಷ್ಟೇ ಅಲ್ಲವೆ. ಹಾಗೆಯೇ ವಿವೇಕವೆಂದರೇನೆಂದು ನಿಮಗೆ ಗೊತ್ತು, ವಿವೇಕಿಗಳಾಗುವುದು ಹೇಗೆ ಎಂದು ತಿಳಿಯಲು ಬಯಸುತ್ತೀರಿ. ಎಲ್ಲ ವಿಧಾನಗಳನ್ನೂ ಪ್ರಶ್ನಿಸುವುದೇ ವಿವೇಕ. ಭಯ ವಿವೇಕವನ್ನು ನಾಶಮಾಡುತ್ತದಲ್ಲವೇ? ಪರೀಕ್ಷಿಸಿ ನೋಡದಂತೆ, ಪ್ರಶ್ನಿಸದಂತೆ, ಪರಿಶೀಲಿಸದಂತೆ ಭಯ ನಿಮ್ಮನ್ನು ತಡೆಯುತ್ತದೆ. ಯಾವುದು ಸತ್ಯ ಎಂದು ತಿಳಿಯಲಾಗದಂತೆ ಭಯ ನಿಮಗೆ ಅಡ್ಡಿಯಾಗಿರುತ್ತದೆ. ನಿಮ್ಮಲ್ಲಿ ಭಯವಿಲ್ಲದಿರುವಾಗ ಬಹುಶಃ ವಿವೇಕಿಗಳಾಗಿರುತ್ತೀರಿ. ಆದ್ದರಿಂದಲೇ ಭಯದ ಪ್ರಶ್ನೆಯನ್ನು ನೀವು ಇಡಿಯಾಗಿ ಪರಿಶೀಲಿಸಿ ಭಯಮುಕ್ತರಾಗಬೇಕು. ಆಗ ನೀವು ವಿವೇಕಿಗಳಾಗುವ ಸಾಧ್ಯತೆ ಇರುತ್ತದೆ. ನಾನು ಹೇಗೆ ವಿವೇಕಿಯಾಗಲಿ? ಎಂದು ಕೇಳುತ್ತಿರುವಾಗ ನೀವು ವಿವೇಕಿಗಳಾಗುವ ವಿಧಾನವೊಂದನ್ನು ತಿಳಿಯಲು ಬಯಸುತ್ತಿರುತ್ತೀರಿ. ಕೇವಲ ಯಾವುದೋ ಒಂದು ವಿಧಾನವನ್ನು ಬೆಳೆಸಿಕೊಳ್ಳುವುದರಿಂದ ನೀವು ಮೂರ್ಖರಾಗುತ್ತೀರಿ.

**ಪ್ರಶ್ನೆ:** ಸಾಯುತ್ತೇವೆಂದು ಎಲ್ಲರಿಗೂ ಗೊತ್ತು. ಆದರೂ ನಮಗೆ ಸಾವಿನ ಬಗ್ಗೆ ಭಯವಿರುವುದು ಏಕೆ?

**ಕೃಷ್ಣಮೂರ್ತಿ:** ಸಾವಿನ ಬಗ್ಗೆ ನಿಮಗೇಕೆ ಭಯ ಇದೆ? ಬದುಕುವುದು ಹೇಗೆ ಎಂದು ನಿಮಗೆ ಗೊತ್ತಿಲ್ಲದಿರುವುದರಿಂದಲೇ? ಪೂರ್ತಿಯಾಗಿ ಬದುಕುವುದು ಹೇಗೆಂದು ತಿಳಿದಿದ್ದರೆ ಸಾವಿಗೆ ಹೆದರುತ್ತಿದ್ದಿರೇನು? ಮರ, ಸೂರ್ಯಾಸ್ತ,

ಹಕ್ಕಿ, ಉದುರುವ ಎಲೆ ಇವನ್ನೆಲ್ಲ ನೀವು ಪ್ರೀತಿಸಿದ್ದರೆ, ಗಂಡಸರ, ಹೆಂಗಸರ, ಬಡವರ ಕಣ್ಣೀರಿನ ಬಗ್ಗೆ ನಿಮಗೆ ಎಚ್ಚರವಿದ್ದರೆ, ನಿಮ್ಮ ಹೃದಯದಲ್ಲಿ ಪ್ರೀತಿಯ ಭಾವವಿದ್ದರೆ ಸಾವಿನ ಬಗ್ಗೆ ಭಯವಿರುತ್ತದೇನು? ನನ್ನ ಮಾತನ್ನು ಸುಮ್ಮನೆ ಒಪ್ಪಿಕೊಳ್ಳಬೇಡಿ. ಒಟ್ಟಾಗಿ ಪರಿಶೀಲಿಸೋಣ. ನೀವು ಸಂತೋಷವಾಗಿ ಬದುಕುತ್ತಿಲ್ಲ, ಸಂತೋಷವಾಗಿಲ್ಲ, ವಸ್ತುಗಳ ಬಗ್ಗೆ, ಸಂಗತಿಗಳ ಬಗ್ಗೆ ಜೀವಂತವಾದ ಸಂವೇದನೆ ಇಲ್ಲ, ಆದುದರಿಂದಲೇ ಸತ್ತಾಗ ಏನಾಗುತ್ತದೆ ಎಂದು ಕೇಳುತ್ತಿದ್ದೀರೇನು? ಬದುಕೆಂಬುದು ನಿಮ್ಮ ಪಾಲಿಗೆ ದುಃಖ, ಆದುದರಿಂದಲೇ ನಿಮಗೆ ಸಾವಿನ ಬಗ್ಗೆ ಆಸಕ್ತಿ. ಸತ್ತ ನಂತರ ಸುಖ ದೊರೆತೀತು ಎಂದು ಭಾವಿಸುತ್ತೀರಿ. ಇದು ಅಗಾಧವಾದ ಸಮಸ್ಯೆ. ಅದನ್ನು ಪರಿಶೀಲಿಸಲು ನಿಮಗೆ ಆಸಕ್ತಿ ಇದೆಯೋ ಇಲ್ಲವೋ ಗೊತ್ತಿಲ್ಲ. ಇದೆಲ್ಲದರ ತಳದಲ್ಲಿರುವುದು ಭಯವೇ–ಸಾಯುವ ಭಯ, ಬದುಕುವ ಭಯ, ನರಳುವುದರ ಬಗ್ಗೆ ಭಯ. ಭಯಕ್ಕೆ ಕಾರಣವೇನು ಎಂದು ತಿಳಿದುಕೊಂಡು ಅದರಿಂದ ಮುಕ್ತರಾಗದಿದ್ದರೆ ಬದುಕಿದ್ದರೂ ಅಷ್ಟೇ, ಸತ್ತರೂ ಅಷ್ಟೇ.

**ಪ್ರಶ್ನೆ:** ಸಂತೋಷವಾಗಿ ಬದುಕುವುದು ಹೇಗೆ?

**ಕೃಷ್ಣಮೂರ್ತಿ:** ಸಂತೋಷವಾಗಿರುವಾಗ ನಿಮಗೆ ಆ ಸಂತೋಷದ ಅರಿವು ಇರುತ್ತದೇನು? ನರಳುತ್ತಿರುವಾಗ, ದೈಹಿಕವಾಗಿ ನೋವು ತಿನ್ನುತ್ತಿರುವಾಗ ಅದರ ಅರಿವು ಇರುತ್ತದೆ. ಯಾರಾದರೂ ನಿಮ್ಮನ್ನು ಹೊಡೆದಾಗ, ನಿಮ್ಮ ಬಗ್ಗೆ ಕೋಪಗೊಂಡಾಗ, ಮನಸ್ಸಿನ ಕಸಿವಿಸಿ, ನರಳಾಟ ನಿಮ್ಮ ಅರಿವಿಗೆ ಬರುತ್ತದೆ. ಆದರೆ ಸಂತೋಷವಾಗಿರುವಾಗ ನಾವು ಸಂತೋಷವಾಗಿದ್ದೇವೆ ಎಂಬ ಎಚ್ಚರ ನಿಮ್ಮಲ್ಲಿರುತ್ತದೆಯೇ? ಆರೋಗ್ಯವಾಗಿರುವಾಗ ದೇಹದ ಬಗ್ಗೆ ಪ್ರಜ್ಞಾಪೂರ್ವಕವಾದ ಎಚ್ಚರವಿರುತ್ತದೆಯೇ? ನಿಜ ಹೇಳಬೇಕೆಂದರೆ ಸಂತೋಷವೆಂಬುದು ಎಚ್ಚರವಿಲ್ಲದ, ಅರಿವಿಲ್ಲದ ಸ್ಥಿತಿ. ಸಂತೋಷವಾಗಿರುವಾಗ ನಾವು ಸಂತೋಷವಾಗಿದ್ದೇವೆ ಎಂಬ ಅರಿವೇ ನಮಗಿರುವುದಿಲ್ಲ. ನಾವು ಸಂತೋಷವಾಗಿದ್ದೇವೆ ಎಂಬ ಎಚ್ಚರ ಮೂಡಿದ ತಕ್ಷಣವೇ ಸಂತೋಷ ಇಲ್ಲವಾಗಿಬಿಡುತ್ತದೆ, ಅಲ್ಲವೇ? ನಾವೆಲ್ಲ ಸಂಕಟಪಡುತ್ತೇವೆ, ನರಳುತ್ತೇವೆ, ಆದರ ಬಗ್ಗೆ ನಮ್ಮಲ್ಲಿ ಎಚ್ಚರವಿರುತ್ತದೆ. ಆದ್ದರಿಂದಲೇ ಈ ಸಂಕಟ, ನರಳಾಟದಿಂದೆಲ್ಲ ತಪ್ಪಿಸಿಕೊಂಡು ಸಂತೋಷ ಎಂದು ಕರೆಯುತ್ತೇವಲ್ಲ, ಅದನ್ನು ಪಡೆಯಲು ಬಯಸುತ್ತೇವೆ. ನಾನು ಸಂತೋಷವಾಗಿದ್ದೇನೆ ಎಂಬ ಎಚ್ಚರವನ್ನಿಟ್ಟುಕೊಂಡೇ ಸಂತೋಷವಾಗಿರಲು ಬಯಸುತ್ತೇವೆ. ನನ್ನಲ್ಲಿ ಸಂತೋಷವಿದೆ ಎಂಬ ಎಚ್ಚರ ಮೂಡಿದೊಡನೆಯೇ ಸಂತೋಷ ಇಲ್ಲವಾಗುತ್ತದೆ. ಸಂತೋಷವು ಆದ ನಂತರ, ಕೆಲವು ಕ್ಷಣಗಳೋ ನಿಮಿಷಗಳೋ ಕಳೆದ ಮೇಲಷ್ಟೇ ಎಷ್ಟು ಸಂತೋಷವಾಗಿದ್ದೆ, ಖುಷಿಯಾಗಿದ್ದೆ ಎಂಬ ಎಚ್ಚರ ಮೂಡುತ್ತದೆ. ಸಂತೋಷ ಆಗುತ್ತಿರುವ ಕ್ಷಣದಲ್ಲಿ ಅದರ ಬಗ್ಗೆ ಎಚ್ಚರವೇ ಇರುವುದಿಲ್ಲ, ಅರಿವೇ ಇರುವುದಿಲ್ಲ. ಇದೇ ಸಂತೋಷದ ಚೆಲುವು, ಸೌಂದರ್ಯ.

# ಸ್ವಾತಂತ್ರ್ಯ ಮತ್ತು ಶಿಸ್ತು

ಶಿಸ್ತಿನ ಸಮಸ್ಯೆ ನಿಜವಾಗಿಯೂ ಜಟಿಲವಾದದ್ದು. ಒಂದಲ್ಲ ಒಂದು ಬಗೆಯ ಶಿಸ್ತನ್ನು ಕ್ರಮವಾಗಿ ಪಾಲಿಸುತ್ತಿದ್ದರೆ ಕ್ರಮೇಣ ಸ್ವಾತಂತ್ರ್ಯವನ್ನು ಪಡೆಯುತ್ತೇವೆ ಎಂದು ನಂಬಿಕೆ ನಮ್ಮಲ್ಲಿ ಅನೇಕರು ತಿಳಿದಿದ್ದೇವೆ. ಪ್ರತಿರೋಧವನ್ನು (ರೆಸಿಸ್ಟೆನ್ಸ್) ಬೆಳೆಸಿಕೊಳ್ಳುವುದೇ ಶಿಸ್ತು, ಅಲ್ಲವೇ? ನಾವು ಯಾವುದನ್ನು ತಪ್ಪು ಎಂದು ತಿಳಿದಿದ್ದೇವೆಯೋ ಅದರ ವಿರುದ್ಧವಾಗಿ ನಮ್ಮೊಳಗೆ ಪ್ರತಿರೋಧವನ್ನು ಬೆಳೆಸಿಕೊಂಡರೆ, ಅಡ್ಡಗೋಡೆಯನ್ನು ಕಟ್ಟಿಕೊಂಡರೆ, ನಮಗೆ ಸತ್ಯ ಅರ್ಥವಾಗುತ್ತದೆ, ಬದುಕಿಗೆ ಹೆಚ್ಚಿನ ಪೂರ್ಣತೆ ದೊರೆಯುತ್ತದೆ ಎಂದು ಭಾವಿಸಿದ್ದೇವೆ. ಇದು ಸತ್ಯವಲ್ಲ, ಅಲ್ಲವೇ? ಯಾವುದೇ ಸಂಗತಿಯ ವಿರುದ್ಧವಾಗಿ ಹೆಚ್ಚು ಹೆಚ್ಚು ಪ್ರತಿರೋಧವನ್ನು ಬೆಳೆಸಿಕೊಂಡರೆ, ಅದರ ವಿರುದ್ಧವಾಗಿ ಹೆಚ್ಚು ಹೆಚ್ಚು ಹೋರಾಡತೊಡಗಿದರೆ, ಆ ಸಂಗತಿ ನಮಗೆ ತಿಳಿಯುವುದು ಕಡಮೆಯಾಗುತ್ತ ಹೋಗುತ್ತದೆ. ಪ್ರಶ್ನಿಸುವ ಸಾಮರ್ಥ್ಯ, ಅನ್ವೇಷಿಸುವ ಸಾಮರ್ಥ್ಯ ಇದ್ದಾಗ ಮಾತ್ರ ನೀವು ಏನನ್ನಾದರೂ ಕಂಡುಕೊಳ್ಳಬಲ್ಲಿರಿ, ಕಾಣಬಲ್ಲಿರಿ.

ಸ್ವಾತಂತ್ರ್ಯಕ್ಕೆ ಬಂಧನಗಳು, ಚೌಕಟ್ಟುಗಳು ಇರಲು ಸಾಧ್ಯವೇ ಇಲ್ಲ ಎಂಬುದು ಸುಸ್ಪಷ್ಟ. ಆದರೆ ನಮ್ಮಲ್ಲಿ ಅನೇಕರು ಚೌಕಟ್ಟುಗಳೊಳಗೆ, ವಿಚಾರ ಮತ್ತು ಐಡಿಯಾಗಳಿಂದ ಬಂಧಿತವಾದ ಜಗತ್ತಿನಲ್ಲಿ ಬದುಕುತ್ತೇವೆ, ಅಲ್ಲವೇ? ಉದಾಹರಣೆಗೆ, ಯಾವುದು ಸರಿ ಯಾವುದು ತಪ್ಪು, ಯಾವುದು ಕೆಟ್ಟದ್ದು ಯಾವುದು ಒಳ್ಳೆಯದು ಎಂದು ನಿಮ್ಮ ತಂದೆತಾಯಿಯರು, ನಿಮ್ಮ ಶಿಕ್ಷಕರು ಹೇಳುತ್ತಿರುತ್ತಾರೆ. ಈ ಬಗ್ಗೆ ಜನ ಏನು ಹೇಳುತ್ತಾರೆ, ಗುರುಗಳು ಏನನ್ನುತ್ತಾರೆ, ಪರಂಪರೆ ಏನು ಹೇಳುತ್ತದೆ, ಶಾಲೆಯಲ್ಲಿ ಏನು ಹೇಳುತ್ತಾರೆ ಎಂಬುದೆಲ್ಲ ನಿಮಗೆ ಗೊತ್ತಿದೆ. ಹೀಗೆ ಹೇಳಿಕೊಡಲಾದ, ಕಟ್ಟಿಕೊಡಲಾದ ಚೌಕಟ್ಟಿನೊಳಗೆ ಬದುಕುತ್ತಾ ನಾವು ಸ್ವತಂತ್ರರು ಎಂದು ತಿಳಿದಿದ್ದೀರಿ. ನೀವು ಸ್ವತಂತ್ರರೇ? ಜೈಲಿನೊಳಗಿರುವ ವ್ಯಕ್ತಿ ಸ್ವತಂತ್ರನೇ?

ಪರಂಪರೆಯು ಕಟ್ಟಿರುವ ಜೈಲಿನ ಗೋಡೆಗಳನ್ನು ಮುರಿದು ಯಾವುದು ಸತ್ಯ, ಯಾವುದು ವಾಸ್ತವ ಎಂಬುದನ್ನು ಸ್ವತಃ ನಾವೇ ಕಂಡುಕೊಳ್ಳಬೇಕು.

ಇತರರು ಎಷ್ಟೇ ಒಳ್ಳೆಯ, ಉದಾತ್ತ ವ್ಯಕ್ತಿಗಳಾಗಿದ್ದರೂ, ಅವರ ಸಾಮೀಪ್ಯ ಎಷ್ಟೇ ರೋಮಾಂಚಕಾರಿಯಾಗಿದ್ದರೂ, ಅವರ ಒಡನಾಟ ಎಷ್ಟೇ ಸಂತೋಷಕರವಾಗಿದ್ದರೂ, ನಾವು ಯಾರನ್ನೂ ಅನುಸರಿಸದೆ, ಅನುಕರಿಸದೆ, ಸ್ವತಃ ಪ್ರಯೋಗಶೀಲರಾಗಿ ಅನ್ವೇಷಿಸಿ ನಮ್ಮಷ್ಟಕ್ಕೆ ನಾವೇ ಸರಿ ತಪ್ಪುಗಳನ್ನು ಕಂಡುಕೊಳ್ಳಬೇಕು. ಪರಂಪರೆಯು ಸೃಷ್ಟಿಸಿರುವ ಮೌಲ್ಯಗಳನ್ನು, ಇದು ಒಳ್ಳೆಯದು ಬದುಕಿಗೆ ಸಹಕಾರಿಯಾದದ್ದು ಎಂದು ಜನ ಹೇಳುವ ಎಲ್ಲವನ್ನೂ, ಸುಮ್ಮನೆ ಒಪ್ಪಿಕೊಳ್ಳದೆ, ಅಂಗೀಕರಿಸದೆ, ಸ್ವತಃ ಪರೀಕ್ಷಿಸಿ ನೋಡುವುದೇ ಅತ್ಯಂತ ಮಹತ್ವದ ಸಂಗತಿ. ಒಮ್ಮೆ ಅಂಗೀಕರಿಸತೊಡಗಿದೊಡನೆ, ಒಪ್ಪಿಕೊಳ್ಳತೊಡಗಿದೊಡನೆ, ನಿಮ್ಮಲ್ಲಿ ಹೊಂದಾಣಿಕೆ, ಅನುಕರಣೆಗಳು ಶುರುವಾಗುತ್ತವೆ. ಇತರರನ್ನು ಹಿಂಬಾಲಿಸುವುದರಿಂದ, ಅನುಕರಿಸುವುದರಿಂದ, ಅನುಸರಿಸುವುದರಿಂದ ನಮಗೆ ಸ್ವಾತಂತ್ರ್ಯವಾಗಲೀ ಸಂತೋಷವಾಗಲೀ ದೊರೆಯುವುದಿಲ್ಲ.

ನೀವು ಶಿಸ್ತಿಗೆ ಒಳಪಟ್ಟು ಬದುಕಬೇಕೆಂದು ಹಿರಿಯರು ಹೇಳುತ್ತಾರೆ. ನಿಮ್ಮ ಮೇಲೆ ನೀವೇ ಶಿಸ್ತನ್ನು ಹೇರಿಕೊಳ್ಳುತ್ತೀರಿ, ಇತರರು ಕೂಡ ಹೊರಗಿನಿಂದ ನಿಮ್ಮ ಮೇಲೆ ಶಿಸ್ತನ್ನು ಹೇರುತ್ತಾರೆ. ಆದರೆ ಸ್ವತಃ ಆಲೋಚಿಸುವ ಮತ್ತು ಪರಿಶೀಲಿಸುವ ಸ್ವಾತಂತ್ರ್ಯ ಮುಖ್ಯ. ದುರದೃಷ್ಟದ ಸಂಗತಿಯೆಂದರೆ ಸ್ವತಃ ಆಲೋಚನೆ ಮಾಡುವುದು, ಪರಿಶೀಲಿಸುವುದು, ಕಂಡುಕೊಳ್ಳುವುದು ಜನಕ್ಕೆ ಬೇಕಾಗಿಲ್ಲ. ಅವರ ಮನಸಿನ ಬಾಗಿಲುಗಳೆಲ್ಲ ಮುಚ್ಚಿಕೊಂಡಿವೆ. ವಸ್ತು ಮತ್ತು ಸಂಗತಿಗಳನ್ನು ಕುರಿತು ಆಳವಾಗಿ ಆಲೋಚಿಸುವುದು, ಅವುಗಳ ಒಳಹೊಕ್ಕು ನೋಡುವುದು, ಸತ್ಯವೇನು ಎಂಬುದನ್ನು ಸ್ವತಃ ಕಂಡುಕೊಳ್ಳುವುದು ಬಹಳ ಕಷ್ಟ. ಅದಕ್ಕೆ ಎಚ್ಚರದ ಗ್ರಹಿಕೆ, ನಿರಂತರವಾದ ಪರಿಶೀಲನೆ, ಇವು ಬೇಕು. ಅನೇಕ ಜನರಿಗೆ ಇಂಥ ಮನೋಧರ್ಮವೂ ಇಲ್ಲ, ಇದಕ್ಕೆ ಬೇಕಾದ ಶಕ್ತಿಯೂ ಇಲ್ಲ. ಈ ಸಂಗತಿ ನನಗಿಂತ ಚೆನ್ನಾಗಿ ನಿನಗೆ ಗೊತ್ತು. ನೀನು ನನ್ನ ಗುರು, ನೀನು ನನ್ನ ನಾಯಕ, ನಾನು ನಿನ್ನನ್ನು ಹಿಂಬಾಲಿಸುತ್ತೇನೆ ಎನ್ನುತ್ತಾರೆ.

ಬೇಕು-ಬೇಡ, ಮಾಡಬೇಕು-ಮಾಡಬಾರದು ಎಂಬ ವಿಧಿ ನಿಷೇಧಗಳ ಗೋಡೆಗಳೊಳಗೆ ಬಂದಿಗಳಾಗದೆ ಸ್ವತಃ ಕಂಡುಕೊಳ್ಳುವ ಸ್ವಾತಂತ್ರ್ಯ ಅತ್ಯಂತ ಚಿಕ್ಕವಯಸ್ಸಿನಿಂದಲೂ ಇರಬೇಕಾದದ್ದು ಬಹಳ ಮುಖ್ಯ. ನೀವು ಏನು ಮಾಡಬೇಕು ಏನು ಮಾಡಬಾರದು ಎಂಬುದನ್ನು ಸತತವಾಗಿ ಹೇಳುತ್ತಲೇ ಇದ್ದರೆ ನಿಮ್ಮ ವಿವೇಕದ ಗತಿ ಏನಾಗುತ್ತದೆ? ಸ್ವಂತ ಆಲೋಚನೆ ಇರದ, ಯಾವುದೋ ಕೆಲಸಕ್ಕೆ ಸೇರಿ ಸುಮ್ಮನೆ ದುಡಿಯುವ, ತಂದೆ ತಾಯಿ ತೋರಿಸಿಕೊಟ್ಟವರನ್ನು ಮದುವೆಯಾಗಿ ಸಂಸಾರಮಾಡುವ, ಜೀವಿಗಳಾಗುತ್ತೀರಿ.

ಹೀಗೆ ಬದುಕುವುದು ವಿವೇಕದ ಬದುಕಲ್ಲ ಅಲ್ಲವೇ? ನೀವು ಪರೀಕ್ಷೆಗಳನ್ನು ಪಾಸು ಮಾಡಿ ದುಡ್ಡು ಮಾಡಿಕೊಂಡು ಚೆನ್ನಾಗಿರಬಹುದು, ಒಳ್ಳೆಯ ಬಟ್ಟೆ ಬರೆ, ಒಡವೆ ವಸ್ತುಗಳನ್ನು ಸಂಪಾದಿಸಬಹುದು, ನೂರಾರು ಗೆಳೆಯರು, ಘನತೆ ಗೌರವಗಳನ್ನು ಪಡೆಯಬಹುದು. ಆದರೆ ಎಲ್ಲಿಯವರೆಗೆ ಪರಂಪರೆಗೆ ಬದ್ಧರಾಗಿಯೇ ಇರುತ್ತೀರೋ ಅಲ್ಲಿಯವರೆಗೆ ವಿವೇಕಿಗಳಾಗಿರುವುದಿಲ್ಲ.

ಪ್ರಶ್ನಿಸುವ, ಪರಿಶೀಲಿಸುವ, ಆಲೋಚಿಸುವ, ಕಂಡುಕೊಳ್ಳುವ ಸ್ವಾತಂತ್ರ್ಯವಿದ್ದಾಗ ಮಾತ್ರ ವಿವೇಕ ಮೂಡುತ್ತದೆ. ಅಂಥ ಸ್ವಾತಂತ್ರ್ಯವಿದ್ದಾಗ ನಿಮ್ಮ ಮನಸ್ಸು ಕ್ರಿಯಾಶೀಲವಾಗಿ, ಅತ್ಯಂತ ಎಚ್ಚರವಾಗಿ, ಸ್ಪಷ್ಟವಾಗಿ ಇರುತ್ತದೆ. ಆಗ ಒಳಗೊಳಗೇ ಭಯಭೀತರಾದ, ಏನು ಮಾಡಬೇಕೆಂದು ಗೊತ್ತಿರದ, ಒಳಗೇ ಏನೋ ಅನ್ನಿಸುತ್ತಿದ್ದರೂ ಹೊರಗೆ ಇನ್ನಾವುದಕ್ಕೋ ಹೊಂದಿಕೊಂಡು ಬದುಕುವ ಜನರಾಗದೆ ಅಖಂಡವಾದ ವ್ಯಕ್ತಿತ್ವ ಉಳ್ಳವರಾಗುತ್ತೀರಿ.

ಪರಂಪರೆಯ ಬಂಧನವನ್ನು ಮುರಿದುಕೊಂಡು ನಿಮ್ಮ ಬದುಕನ್ನು ನೀವೇ ಸಾಗಿಸಿದಾಗ ಮಾತ್ರ ವಿವೇಕವಿರುತ್ತದೆ. ಆದರೆ ನೀವು ಏನು ಮಾಡಬೇಕು, ಏನು ಮಾಡಬಾರದು ಎಂದು ಅಪ್ಪ ಅಮ್ಮ ಹೇಳುತ್ತಾರಲ್ಲ ಅದಕ್ಕೆ, ಸಮಾಜ ಮತ್ತು ಪರಂಪರೆ ಹೇಳುತ್ತದಲ್ಲ ಅದಕ್ಕೆ ಬದ್ಧರಾಗಿದ್ದೀರಿ. ಅದರಿಂದ ನಿಮ್ಮೊಳಗೇ ಸಂಘರ್ಷ ನಡೆಯುತ್ತಿದೆ, ಅಲ್ಲವೇ? ನೀವೆಲ್ಲ ಚಿಕ್ಕವರು ನಿಜ. ಆದರೆ ಈ ಬಗ್ಗೆ ಎಚ್ಚರವಿರದಷ್ಟು ಚಿಕ್ಕವರಲ್ಲ. ನಿಮಗೆ ಏನೋ ಮಾಡಬೇಕೆನಿಸುತ್ತದೆ, ಆದರೆ ಶಿಕ್ಷಕರು ಅಪ್ಪ ಅಮ್ಮಂದಿರು ಬೇಡ ಎನ್ನುತ್ತಾರೆ. ನಿಮ್ಮೊಳಗೇ ಸಂಘರ್ಷ ಶುರುವಾಗುತ್ತದೆ. ಅದನ್ನು ಪರಿಹರಿಸಿಕೊಳ್ಳುವವರೆಗೆ ಹೋರಾಟ, ನೋವು, ದುಃಖ ತಪ್ಪಿದ್ದಲ್ಲ. ಏನೋ ಮಾಡಬೇಕೆಂದು ಸದಾ ಬಯಸುತ್ತಾ ಅದನ್ನು ಮಾಡಲಾಗದೆ ಒಳಗೇ ಅಡ್ಡಿ ಆತಂಕಗಳನ್ನು ಎದುರಿಸುತ್ತಾ ಇರುವುದು ತಪ್ಪುವುದಿಲ್ಲ.

ಈ ಸಂಗತಿಯನ್ನು ಗಹನವಾಗಿ ಪರಿಶೀಲಿಸಿದರೆ ಸ್ವಾತಂತ್ರ್ಯ ಮತ್ತು ಶಿಸ್ತು ಪರಸ್ಪರ ವಿರುದ್ಧವಾದ ಸಂಗತಿಗಳೆಂಬುದು ನಿಮಗೇ ಕಾಣುತ್ತದೆ. ನಿಜವಾದ ಸ್ವಾತಂತ್ರ್ಯವನ್ನು ಕಂಡುಕೊಳ್ಳಲು ಬೇರೆಯದೇ ದಾರಿಯನ್ನು ಹಿಡಿದು ಸಾಗಿದಾಗ ಕೆಲವು ಕೆಲಸಗಳನ್ನು ಮಾಡದೆ ಇರುವ ಸ್ಪಷ್ಟತೆಯನ್ನು ಸ್ವತಃ ಮೂಡುತ್ತದೆ.

ನಿಮ್ಮ ಬದುಕಿನಲ್ಲಿ ನಿಜವಾಗಿ ಏನು ಮಾಡಬೇಕೆಂದಿದ್ದೀರಿ ಎಂಬುದನ್ನು ಚಿಕ್ಕಂದಿನಲ್ಲೇ ಕಂಡುಕೊಳ್ಳುವುದು, ಹಾಗೆ ಕಂಡುಕೊಳ್ಳಲು ನಿಮಗೆ ಸಹಾಯವಾಡುವುದು ಬಹಳ ಮುಖ್ಯ. ನಿಮ್ಮ ಎಳೆಯ ವಯಸ್ಸಿನಲ್ಲೇ ಇವನ್ನು

ಕಂಡುಕೊಳ್ಳದಿದ್ದರೆ ಮುಂದೆ ಎಂದೂ ಕಂಡುಕೊಳ್ಳಲಾರಿರಿ. ಎಂದೂ ಸ್ವತಂತ್ರ, ಸಂತೋಷಭರಿತ ವ್ಯಕ್ತಿಗಳಾಗಲಾರಿರಿ. ಸ್ವಾತಂತ್ರ್ಯದ ಬೀಜಗಳನ್ನು ಈಗಲೇ ಬಿತ್ತಬೇಕು, ಉತ್ಸಾಹ ಈಗಲೇ ಮೂಡಬೇಕು.

ರಸ್ತೆಯಲ್ಲಿ ಹೋಗುವಾಗ ಭಾರವಾದ ಹೊರೆಹೊತ್ತು ಸಾಗುವ ಹಳ್ಳಿಯ ಜನರನ್ನು ನೋಡಿದ್ದೀರಿ, ಅಲ್ಲವೇ? ಅವರ ಬಗ್ಗೆ ನಿಮ್ಮಲ್ಲಿ ಯಾವ ಭಾವನೆ, ಫೀಲಿಂಗ್ ಮೂಡಿದೆ? ಅಥವಾ ಕೇವಲ ನಿಮ್ಮ ಬಗ್ಗೆಯೇ ಕಳವಳಪಡುತ್ತಾ, ಪರೀಕ್ಷೆಯ ಬಗ್ಗೆಯೇ ಯೋಚಿಸುತ್ತಾ, ಮನಸ್ಸಿನಲ್ಲಿ ಏನೇನೋ ಭಯಗಳನ್ನು ತುಂಬಿಕೊಂಡು, ನೀವು ಬೇರೆಯವರಿಗೆ ಹೇಗೆ ಕಾಣುತ್ತಿದ್ದೀರಿ, ನಿಮ್ಮ ಸೀರೆ ಸರಿಯಾಗಿದೆಯೋ ಇಲ್ಲವೋ ಎಂಬಂಥ ಆತಂಕಗಳನ್ನು ತುಂಬಿಕೊಂಡು, ಅವರನ್ನೆಲ್ಲ ಗಮನಿಸುವುದೇ ಇಲ್ಲವೋ? ನೀವು ಅವರೆಲ್ಲರಿಗಿಂತ ಉತ್ತಮರು, ಉನ್ನತ ವರ್ಗದವರು, ಆದುದರಿಂದಲೇ ಅವರ ಬಗ್ಗೆ ಚಿಂತೆಮಾಡುವ ಅಗತ್ಯವಿಲ್ಲ ಎನಿಸುತ್ತದೆಯೇ? ಅಂಥ ಜನ ರಸ್ತೆಯಲ್ಲಿ ಎದುರಾದಾಗ ನೀವು ಹೇಗೆ ಫೀಲ್ ಮಾಡುತ್ತೀರಿ? ಅವರಿಗೆ ಸಹಾಯಮಾಡಬೇಕೆನಿಸುತ್ತದೆಯೇ? ಇಲ್ಲವೇ? ಇಂಥ ಪ್ರಶ್ನೆಗಳಿಗೆ ಉತ್ತರಕೊಟ್ಟುಕೊಂಡರೆ ನಿಮ್ಮ ಆಲೋಚನೆಯ ಬಗ್ಗೆ ನಿಮಗೇ ಸೂಚನೆ ದೊರೆಯುತ್ತದೆ. ನೀವು ನಿರ್ದಿಷ್ಟ ವರ್ಗಕ್ಕೆ ಸೇರಿದವರೆಂದು ಅಪ್ಪಂದಿರು ಅಮ್ಮಂದಿರು ಹೇಳುವುದನ್ನು ಕೇಳಿ ಕೇಳಿ, ಶತಮಾನಗಳಿಂದ ಪರಂಪರೆ ಹೇಳಿರುವುದನ್ನು ಕೇಳಿ, ಹಳ್ಳಿಯ ಜನರನ್ನು ನೋಡಲು ಕೂಡ ಆಗಲಾರದಷ್ಟು ನಿಮ್ಮ ಮನಸ್ಸು ಜಡ್ಡಾಗಿಬಿಟ್ಟಿದೆಯೇ? ನಿಮ್ಮ ಸುತ್ತಲೂ ಏನಾಗುತ್ತಿದೆ ಎಂಬುದನ್ನು ಕಾಣಲಾರದಷ್ಟು ಕುರುಡಾಗಿಬಿಟ್ಟಿದೆಯೇ ನಿಮ್ಮ ದೃಷ್ಟಿ?

ಭಯ–ತಂದೆತಾಯಿಯರು ಏನನ್ನುವರೋ ಎಂಬ ಭಯ, ಶಿಕ್ಷಕರು ಏನನ್ನುವರೋ ಎಂಬ ಭಯ, ಪರಂಪರೆಯ ಬಗ್ಗೆ ಭಯ, ಬದುಕಿನ ಬಗ್ಗೆ ಭಯ, ಈ ಭಯವೇ ನಮ್ಮ ಸಂವೇದನೆಗಳನ್ನು ನಿಧಾನವಾಗಿ ಕೊಲ್ಲುತ್ತದೆಯಲ್ಲವೇ? ಸಂವೇದನೆ ಎಂದರೇನು? ಸೂಕ್ಷ್ಮವಾದ ಭಾವಗಳನ್ನು ಅನುಭವಿಸುವ ಸಾಮರ್ಥ್ಯ, ದುಃಖದಲ್ಲಿರುವವರನ್ನು ಕಂಡು ಸಹಾನುಭೂತಿಯನ್ನು ಅನುಭವಿಸುವ ಸಾಮರ್ಥ್ಯ, ಪ್ರೀತಿತೋರುವ ಸಾಮರ್ಥ್ಯ, ನಿಮ್ಮ ಸುತ್ತಲೂ ಏನಾಗುತ್ತಿದೆ ಎಂಬುದರ ಬಗ್ಗೆ ಇರುವ ಎಚ್ಚರ, ಇವೆಲ್ಲ ಸೇರಿದ್ದೇ ಸಂವೇದನೆ. ದೇವಾಲಯದ ಗಂಟೆಯ ಸದ್ದು ಕೇಳಿಸುತ್ತಿದೆಯೇ? ಅದರ ಬಗ್ಗೆ ಎಚ್ಚರವಿದೆಯೇ? ಆಲಿಸುತ್ತಿದ್ದೀರಾ ಅದನ್ನು? ನೀರಿನ ಮೇಲೆ ಬಿದ್ದಿರುವ ಎಳೆಯ ಬಿಸಿಲನ್ನು ಕಾಣುತ್ತಿದ್ದೀರಾ? ಅನೇಕ ಶತಮಾನಗಳಿಂದ ಶೋಷಣೆಗೆ, ದಬ್ಬಾಳಿಕೆಗೆ ಗುರಿಯಾಗಿರುವ ಹಳ್ಳಿಗರನ್ನು ಕಾಣುತ್ತಿದ್ದೀರಾ? ಸೇವಕನೊಬ್ಬ ಭಾರವಾದ ಕಾರ್ಪೆಟ್ಟನ್ನು ಹೊತ್ತು ಸಾಗುತ್ತಿರುವಾಗ ಅವನಿಗೆ ಸಹಾಯಮಾಡಬೇಕು ಎನಿಸಿದೆಯೇ?

ಹೌದಾದರೆ ಇವೆಲ್ಲವೂ ಸಂವೇದನೆಯನ್ನು ಸೂಚಿಸುತ್ತವೆ. ನೋಡಿ, ಬಲವಂತವಾದ ಶಿಸ್ತಿಗೆ ಒಳಪಟ್ಟಿದ್ದಾಗ, ನಮ್ಮ ಬಗ್ಗೆ ನಮಗೇ ಭಯವಿರುವಾಗ ಸಂವೇದನೆ ನಾಶವಾಗುತ್ತದೆ. ನಮ್ಮ ಬಟ್ಟೆ, ನಮ್ಮ ಅಲಂಕಾರ, ಇತ್ಯಾದಿಗಳ ಬಗಗೇ ಸದಾಕಾಲವೂ ಚಿಂತಿಸುತ್ತಿರುವುದು ಸಂವೇದನಾ ಶೂನ್ಯತೆಯನ್ನು ತೋರುತ್ತದೆ. ನಮ್ಮಲ್ಲಿ ಅನೇಕರು ಸದಾ ನಮ್ಮ ಬಗ್ಗೆಯೇ ಚಿಂತಿಸುತ್ತಿರುವ ಸಂವೇದನಾಶೂನ್ಯರಾಗಿರುತ್ತೇವೆ. ಸದಾ ನಮ್ಮ ಬಗ್ಗೆಯೇ ಚಿಂತಿತವಾಗಿರುವಾಗ ನಮ್ಮ ಮನಸ್ಸು ಹೃದಯಗಳು ಬಂದಿಗಳಾಗಿರುತ್ತವೆ, ಸಂವೇದನಾಶೂನ್ಯವಾಗಿರುತ್ತವೆ, ಚೆಲುವನ್ನು ಕಾಣಲಾರದವಾಗಿರುತ್ತವೆ.

ನಿಜವಾಗಿ ಸ್ವತಂತ್ರರಾಗುವುದೆಂದರೆ ಅಪಾರವಾದ ಸೂಕ್ಷ್ಮ ಸಂವೇದನೆಯನ್ನು ಹೊಂದಿರುವುದು. ನೀವು ಕೇವಲ ಸ್ವಂತದ ಹಿತಾಸಕ್ತಿಯಲ್ಲಿ ಮುಳುಗಿದ್ದರೆ, ಶಿಸ್ತಿನ ಗೋಡೆಗಳ ನಡುವೆ ಬಂದಿಯಾಗಿದ್ದರೆ, ಸ್ವಾತಂತ್ರ್ಯವಿರುವುದಿಲ್ಲ. ನಿಮ್ಮ ಬದುಕು ಕೇವಲ ಅನುಕರಣೆಯ ಬದುಕಾಗಿದ್ದರೆ ಸಂವೇದನೆಯೂ ಇರುವುದಿಲ್ಲ, ಸ್ವಾತಂತ್ರ್ಯವೂ ಇರುವುದಿಲ್ಲ. ನೀವು ಇಲ್ಲಿರುವಾಗ ಸ್ವಾತಂತ್ರ್ಯದ ಬೀಜಗಳನ್ನು ಬಿತ್ತಿಕೊಳ್ಳಬೇಕು. ಅದರ ಮೂಲಕ ವಿವೇಕವನ್ನು ಎಚ್ಚರಗೊಳಿಸಿಕೊಳ್ಳಬೇಕು. ವಿವೇಕಿಗಳಾದರೆ ಬದುಕಿನ ಸಮಸ್ಯೆಗಳನ್ನು ಬಿಡಿಸಬಲ್ಲವರಾಗುತ್ತೀರಿ.

**ಪ್ರಶ್ನೆ:** ಎಲ್ಲ ಬಗೆಯ ಭಯದ ಭಾವವನ್ನೂ ಕಳೆದುಕೊಂಡು ಕೂಡ ವ್ಯಕ್ತಿಯೊಬ್ಬ ಸಮಾಜದಲ್ಲಿ ಬದುಕಲು ಸಾಧ್ಯವೇ?

**ಕೃಷ್ಣಮೂರ್ತಿ:** ಸಮಾಜವೆಂದರೇನು? ಕೆಲವು ನಿಯಮ, ಕೆಲವು ನಿಬಂಧನೆ, ಕೆಲವು ಮೌಲ್ಯ, ಮತ್ತು ಪರಂಪರೆಗಳ ಸಮೂಹವಲ್ಲವೇ? ಈ ಪರಿಸ್ಥಿತಿಯನ್ನು ಹೊರಗಿನಿಂದ ನೋಡಿ ಇವುಗಳೊಂದಿಗೆಲ್ಲ ನಾನು ವ್ಯಾವಹಾರಿಕ (ಪ್ರಾಕ್ಟಿಕಲ್) ಸಂಬಂಧವನ್ನು ಇಟ್ಟುಕೊಳ್ಳಬಹುದೇ? ಎಂದು ಕೇಳುತ್ತೀರಿ? ಯಾಕಿಟ್ಟುಕೊಳ್ಳಬಾರದು? ಕೇವಲ ಒಂದು ನಿರ್ದಿಷ್ಟ ಚೌಕಟ್ಟಿಗೆ ನಿಮ್ಮನ್ನು ಅಳವಡಿಸಿಕೊಂಡು, ಹೊಂದಿಸಿಕೊಂಡು ಬದುಕುವುದಾದರೆ ನೀವು ಸ್ವತಂತ್ರವಾಗಿರಲು ಸಾಧ್ಯವೇನು? ಇಷ್ಟಕ್ಕೂ ವ್ಯಾವಹಾರಿಕ ಎಂಬ ನಿಮ್ಮ ಮಾತಿನ ಅರ್ಥವೇನು? ಹೊಟ್ಟೆಯ ಪಾಡಿಗೆ ಏನೋ ಒಂದಷ್ಟು ಸಂಪಾದನೆ ಮಾಡುವುದೇ? ಹೊಟ್ಟೆಯಪಾಡು ನೋಡಿಕೊಳ್ಳುವುದಕ್ಕೆ ಹಲವಾರು ದಾರಿಗಳಿವೆ. ನೀವು ಸ್ವತಂತ್ರರಾಗಿದ್ದರೆ ನಿಮಗೆ ಇಷ್ಟವಾದ ದಾರಿಯನ್ನು ಆಯ್ದುಕೊಳ್ಳುತ್ತೀರೋ ಅಥವ ನಿಮ್ಮ ಸ್ವಾತಂತ್ರ್ಯವನ್ನು ಮರೆತು ಸಮಾಜ ದ ಚೌಕಟ್ಟಿಗೆ ಹೊಂದಿಸಿಕೊಂಡು ಲಾಯರೋ, ಗುಮಾಸ್ತನೋ, ವ್ಯಾಪಾರಿಯೋ, ಠಾಣಾಡಮಾಲಿಯೋ ಆಗುವುದು ವ್ಯಾವಹಾರಿಕ ಎನ್ನುತ್ತೀರೋ? ನೀವು

ಸ್ವತಂತ್ರರಾಗಿದ್ದು ನಿಮ್ಮ ವಿವೇಕವನ್ನು ಬೆಳೆಸಿಕೊಂಡಿದ್ದರೆ ನೀವು ಮಾಡಬಹುದಾದ ಅತ್ಯುತ್ತಮ ಕೆಲಸವನ್ನು ಆಯ್ದುಕೊಳ್ಳುತ್ತೀರಿ. ಅಪ್ಪ ಅಮ್ಮ ಏನೇ ಹೇಳಲಿ, ಜನ ಒಪ್ಪಲಿ ಬಿಡಲಿ, ಸಂಪ್ರದಾಯ ಪರಂಪರೆಗಳನ್ನೆಲ್ಲ ಪಕ್ಕಕ್ಕೆ ಸರಿಸಿ ನೀವು ನಿಜವಾಗಿ ಪ್ರೀತಿಸುವ ಕೆಲಸವನ್ನು ಮಾಡುತ್ತೀರಿ. ನೀವು ಸ್ವತಂತ್ರರಾದುದರಿಂದಲೇ ವಿವೇಕಿಗಳಾಗಿರುತ್ತೀರಿ, ಸಂಪೂರ್ಣವಾಗಿ ನಿಮ್ಮದೇ ಆದ ಕೆಲಸವನ್ನು ಮಾಡುತ್ತೀರಿ, ಅಖಂಡವಾದ ವ್ಯಕ್ತಿತ್ವವುಳ್ಳವರಾಗುತ್ತೀರಿ.

**ಪ್ರಶ್ನೆ:** ದೇವರು ಎಂದರೇನು?

**ಕೃಷ್ಣಮೂರ್ತಿ:** ಹೇಗೆ ಕಂಡುಹಿಡಿಯುತ್ತೀರಿ? ಬೇರೆ ಯಾರೋ ಕೊಟ್ಟ ಮಾಹಿತಿಯನ್ನು ಸ್ವೀಕರಿಸಿ ಒಪ್ಪಿಕೊಳ್ಳುತ್ತೀರೇನು? ಅಥವಾ ದೇವರೆಂದರೆ ಏನು ಎಂದು ಸ್ವತಃ ನೀವೇ ಕಂಡುಕೊಳ್ಳಲು ಪ್ರಯತ್ನಿಸುತ್ತೀರೋ? ಪ್ರಶ್ನೆಯನ್ನು ಕೇಳುವುದು ಸುಲಭ. ಆದರೆ ಸತ್ಯವಾದ ಅನುಭವವನ್ನು ಪಡೆಯುವುದಕ್ಕೆ ಅಗಾಧವಾದ ವಿವೇಕ ಬೇಕಾಗುತ್ತದೆ, ಅಪಾರವಾದ ಪರಿಶೀಲನೆ, ಹುಡುಕಾಟ ಬೇಕಾಗುತ್ತದೆ.

ಮೊದಲನೆಯ ಪ್ರಶ್ನೆಯೆಂದರೆ ದೇವರ ಬಗ್ಗೆ ಬೇರೆಯವರು ಹೇಳಿದುದನ್ನು ಒಪ್ಪಿಕೊಳ್ಳುತ್ತೀರಾ ಎಂಬುದು. ಹೇಳುತ್ತಿರುವವರು ಯಾರು, ಕೃಷ್ಣನೋ, ಬುದ್ಧನೋ, ಕ್ರಿಸ್ತನೋ ಎಂಬುದು ಮುಖ್ಯವಲ್ಲ. ಅವರೆಲ್ಲರೂ ಯಾಕೆ ತಪ್ಪು ತಿಳಿದಿರಬಾರದು? ನಿಮ್ಮ ಗುರು ಕೂಡ ತಪ್ಪು ತಿಳಿದಿರಬಹುದಲ್ಲವೇ? ಸತ್ಯ ಏನು ಎಂದು ತಿಳಿಯುವುದಕ್ಕೆ ನಿಮ್ಮ ಮನಸ್ಸು ವಿಚಾರಿಸುವ ಸ್ವಾತಂತ್ರ್ಯವನ್ನು ಪಡೆದಿರಬೇಕು. ಅಂದರೆ ಸುಮ್ಮನೆ ಒಪ್ಪಿಕೊಳ್ಳುವುದರಿಂದ, ನಂಬುವುದರಿಂದ ಪ್ರಯೋಜನವಿಲ್ಲ. ಸತ್ಯವನ್ನು ನಾನು ನಿಮಗೆ ವಿವರಿಸಿ ಹೇಳಬಹುದು. ಆದರೆ ಆ ವಿವರಣೆಯೇ ಬೇರೆ, ಆ ಸತ್ಯವನ್ನು ನೀವೇ ಸ್ವತಃ ಅನುಭವಿಸುವುದೇ ಬೇರೆ ಸಂಗತಿಯಾಗಿರುತ್ತದೆ. ಎಲ್ಲ ಪವಿತ್ರಗ್ರಂಥಗಳೂ ದೇವರನ್ನು ವಿವರಿಸುತ್ತವೆ. ಆದರೆ ಅದು ವಿವರಣೆ ಮಾತ್ರ. ದೇವರು ಎಂಬ ಪದವೇ ದೇವರಲ್ಲ, ಅಲ್ಲವೇ?

ಸತ್ಯ ಏನು ಎಂದು ಕಂಡುಕೊಳ್ಳಲು ನೀವು ಎಂದೂ ಬೇರೆಯವರು ಹೇಳಿದ್ದನ್ನು ಸುಮ್ಮನೆ ಅಂಗೀಕರಿಸಬಾರದು, ಪುಸ್ತಕಗಳು, ಶಿಕ್ಷಕರು ಹೇಳುವುದನ್ನು ಸುಮ್ಮನೆ ಒಪ್ಪಿಕೊಂಡುಬಿಡಬಾರದು. ನೀವು ಬೇರೆಯವರ ಪ್ರಭಾವಕ್ಕೆ ಒಳಗಾದರೆ ನೀವು ಏನನ್ನು ಕಾಣಬೇಕೆಂದು ಅವರು ಬಯಸುತ್ತಾರೆಯೋ ಅದನ್ನು ಮಾತ್ರ ಕಾಣುವಿರಿ. ನಿಮ್ಮ ಮನಸ್ಸು ಕೂಡ ತಾನು ಕಾಣಬೇಕೆಂದು ಬಯಸುವುದರ ಚಿತ್ರವನ್ನು ಮೂಡಿಸಿಕೊಳ್ಳಬಲ್ಲುದು ಎಂಬುದೂ ನಿಮಗೆ ಗೊತ್ತಿರಬೇಕು. ದೇವರಿಗೆ

ಗಡ್ಡ ಇರುವಂತೆ, ಅಥವ ಒಂದೇ ಕಣ್ಣು ಇರುವಂತೆ ನಿಮ್ಮ ಮನಸ್ಸು ಕಲ್ಪಿಸಿಕೊಳ್ಳಬಹುದು. ದೇವರ ಮೈಯಿಗೆ ನೀಲಿ ಬಣ್ಣವನ್ನೋ ಹಳದಿಬಣ್ಣವನ್ನೋ ಕೊಟ್ಟುಕೊಳ್ಳಬಹುದು. ಅಂದರೆ ನಿಮ್ಮಲ್ಲಿರುವ ಆಸೆಗಳು ನಿಮ್ಮ ಹಂಬಲಗಳಿಗೆ ಅನುಗುಣವಾಗಿ ಕಾಲ್ಪನಿಕ ಚಿತ್ರಗಳನ್ನು ಮೂಡಿಸುವ ಬಗ್ಗೆ ನಿಮ್ಮಲ್ಲಿ ಎಚ್ಚರವಿರಬೇಕು. ದೇವರನ್ನು ಒಂದು ನಿರ್ದಿಷ್ಟ ರೂಪದಲ್ಲಿ ಕಾಣುವ ಹಂಬಲ ನಿಮಗಿದ್ದರೆ ನಿಮ್ಮ ಬಯಕೆಗೆ ಅನುಗುಣವಾದ ರೂಪದ ಚಿತ್ರವೇ ನಿಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಆದರೆ ಆ ನಿಮ್ಮ ಕಲ್ಪನೆಯ ಚಿತ್ರವೇ ದೇವರಲ್ಲ, ಅಲ್ಲವೇ? ನೀವು ದುಃಖಿಗಳಾಗಿದ್ದು ನಿಮ್ಮನ್ನು ಸಾಂತ್ವನಗೊಳಿಸುವ ದೇವರನ್ನು ಬಯಸುತ್ತಿದ್ದರೆ, ಅಥವ ನೀವು ರೊಮ್ಯಾಂಟಿಕ್ ಆಗಿದ್ದು ಪ್ರೀತಿಸಬಲ್ಲಂಥ ದೇವರನ್ನು ಬಯಸುತ್ತಿದ್ದರೆ, ಕ್ರಮೇಣ ಅಂಥ ದೇವರ ಕಾಲ್ಪನಿಕ ಚಿತ್ರವನ್ನೇ ಮೂಡಿಸಿಕೊಂಡು ಕಾಣತೊಡಗುತ್ತೀರಿ. ಆದರೆ ಅದು ಕೂಡ ದೇವರಲ್ಲ.

ಯಾವುದೋ ನಂಬಿಕೆಯನ್ನು ಬೆಳೆಸಿಕೊಳ್ಳುವುದರಿಂದ ಅಲ್ಲ, ಪವಿತ್ರವೆಂದು ಕರೆಯಲಾಗುವ ಗ್ರಂಥಗಳನ್ನು ಓದುವುದರಿಂದಲ್ಲ, ಯಾರೋ ಗುರುವನ್ನು ಹಿಂಬಾಲಿಸುವುದರಿಂದಲೂ ಅಲ್ಲ, ನಿಮ್ಮ ಮನಸ್ಸು ಸಂಪೂರ್ಣವಾಗಿ, ಕಲ್ಪನೆಗಳ ಬಂಧನಕ್ಕೆ ಕೂಡ ಸಿಲುಕಿಕೊಳ್ಳದೆ ಸ್ವತಂತ್ರವಾಗಿರುವಾಗ ಮಾತ್ರ ಸತ್ಯವನ್ನು ಹುಡುಕಿ ಕಂಡುಕೊಳ್ಳಬಲ್ಲಿರಿ. ಬಾಹ್ಯ ಪ್ರಭಾವಗಳು ಇಲ್ಲದೆ, ನಿಮ್ಮ ಮನಸ್ಸಿನದೇ ಆದ ಆಸೆ ಹಂಬಲಗಳೂ ಇಲ್ಲದೆ, ಮನಸ್ಸು ಪೂರ್ಣವಾಗಿ ಸ್ವತಂತ್ರವಾಗಿರುವಾಗ, ಸ್ವಚ್ಛವಾಗಿರುವಾಗ, ಆಗ ಮಾತ್ರ ದೇವರು ಎಂದರೇನು ಎಂದು ಹುಡುಕಿ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ನೀವು ಸುಮ್ಮನೆ ಕುಳಿತು ಕಲ್ಪಿಸಿಕೊಳ್ಳುತ್ತ, ಊಹಿಸಿಕೊಳ್ಳುತ್ತಾ ಇದ್ದರೆ ನಿಮ್ಮ ಕಲ್ಪನೆ ಕೂಡ ನಿಮ್ಮ ಗುರುವಿನ ಕಲ್ಪನೆಯಷ್ಟೇ ಸುಂದರವೋ ಭ್ರಮಾತ್ಮಕವೋ ಆಗಿರುತ್ತದೆ.

**ಪ್ರಶ್ನೆ:** ಸುಪ್ತವಾಗಿರುವ ಆಸೆ, ಕಾಮನೆಗಳ ಬಗ್ಗೆ ಜಾಗೃತರಾಗಿರಬಹುದೇ?

**ಕೃಷ್ಣಮೂರ್ತಿ:** ಮೊದಲನೆಯದಾಗಿ ನಿಮ್ಮಲ್ಲಿರುವ ಜಾಗೃತ ಆಸೆ, ಕಾಮನೆಗಳ ಬಗ್ಗೆ ನಿಮಗೆ ಎಚ್ಚರವಿದೆಯೇ? ಆಸೆ, ಕಾಮನೆ ಎಂದರೇನು ಗೊತ್ತೇ? ನೀವು ನಂಬಿರುವುದಕ್ಕೆ ವಿರುದ್ಧವಾದುದನ್ನು ಯಾರಾದರು ಹೇಳಿದರೆ ಆ ಮಾತುಗಳನ್ನು ನೀವು ಕೇಳಿಸಿಕೊಳ್ಳುವುದೇ ಇಲ್ಲ ಎಂಬುದನ್ನು ಗಮನಿಸಿದ್ದೀರಾ? ನಿಮ್ಮಲ್ಲಿರುವ ಆಸೆಯೇ ಅವರ ಮಾತು ಕೇಳಿಸಿಕೊಳ್ಳದಂತೆ ನಿಮ್ಮನ್ನು ತಡೆಯುತ್ತದೆ. ನಿಮ್ಮಲ್ಲಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವ ಆಸೆ ಇದೆ ಎಂದಿಟ್ಟುಕೊಳ್ಳಿ. ಆ ಆಸೆಯು ನಿಮ್ಮ ಹತಾಶೆ ಮತ್ತು ಭಯಗಳ ಪರಿಣಾಮವಾಗಿ ಮೂಡಿದೆ ಎಂದು ಯಾರಾದರೂ ಹೇಳಿದರೆ ಅವರ ಮಾತನ್ನು ಕೇಳುತ್ತೀರಾ?

ಇಲ್ಲ. ನೀವು ಬಯಸುವುದು, ಆಸೆ ಪಡುವುದು ಒಂದು, ಸತ್ಯ ಅದಕ್ಕಿಂತ ಬೇರೆಯದೇ ಆದ ಇನ್ನೇನೋ ಒಂದು ಆಗಿರುತ್ತದೆ. ನೀವು ನಿಮ್ಮ ಆಸೆಗಳಿಗೆ ಮಾತ್ರ ಬದ್ಧರಾಗಿರುತ್ತೀರಿ. ನಿಮ್ಮ ಜಾಗೃತ ಮನಸ್ಸಿನಲ್ಲಿರುವ ಆಸಗಳ ಬಗ್ಗೆ ಕೂಡ ನಿಮ್ಮಲ್ಲಿ ಅರ್ಧ ಎಚ್ಚರ ಮಾತ್ರವಿರುತ್ತದೆ, ಅಲ್ಲವೇ? ಮನಸ್ಸಿನ ಆಳದಲ್ಲಿ ಸುಪ್ತವಾಗಿರುವ ಆಸೆಗಳ ಬಗ್ಗೆ ಎಚ್ಚರವನ್ನು ಪಡೆದುಕೊಳ್ಳುವುದು ಇನ್ನೂ ಬಹಳ ಕಷ್ಟದ ಕೆಲಸ. ನಮ್ಮಲ್ಲಿ ಸುಪ್ತವಾಗಿರುವ ಆಸೆಗಳನ್ನು ಕಂಡುಕೊಳ್ಳಬೇಕಾದರೆ, ನಮ್ಮ ಕ್ರಿಯೆಗಳ ಹಿಂದಿರುವ ಸುಪ್ತ ಉದ್ದೇಶಗಳನ್ನು ಅರಿತುಕೊಳ್ಳಬೇಕಾದರೆ, ನಮ್ಮ ಮನಸ್ಸು ಬಹಳ ಸ್ಪಷ್ಟ, ಸ್ವಚ್ಛ ಮತ್ತು ಸ್ವತಂತ್ರವಾಗಿರಬೇಕು. ಮೊದಲು ನಿಮ್ಮಲ್ಲಿರುವ ಜಾಗೃತ ಆಸೆ, ಕಾಮನೆಗಳ ಬಗ್ಗೆ ಎಚ್ಚರವನ್ನು ಪಡೆದುಕೊಳ್ಳಿ. ಹೀಗೆ ಮನಸ್ಸಿನ ಮೇಲು ಪದರದಲ್ಲಿರುವ ಆಸೆ, ಕಾಮನೆಗಳ ಬಗ್ಗೆ ಎಚ್ಚರ ಹೆಚ್ಚಾದಂತೆ ಇನ್ನೂ ಆಳದ ಆಸೆ, ಕಾಮನೆಗಳನ್ನು ಅರಿತುಕೊಳ್ಳಬಹುದು.

**ಪ್ರಶ್ನೆ:** ಕೆಲವು ಜನ ಬಡತನದಲ್ಲಿಯೇ ಬದುಕುತ್ತಾರೆ, ಇನ್ನು ಕೆಲವರು ಶ್ರೀಮಂತರಾಗಿರುತ್ತಾರೆ, ಏಕೆ?

**ಕೃಷ್ಣಮೂರ್ತಿ:** ಈ ಬಗ್ಗೆ **ನಿಮಗೆ** ಏನನ್ನಿಸುತ್ತದೆ? ನನ್ನನ್ನು ಪ್ರಶ್ನಿಸಿ ನನ್ನ ಉತ್ತರಕ್ಕೆ ಕಾಯುವ ಬದಲಾಗಿ **ನಿಮಗೆ** ಈ ಬಗ್ಗೆ ಯಾವ ಫೀಲಿಂಗ್ ಇದೆ ಎಂದು ಏಕೆ ಕಂಡುಕೊಳ್ಳಬಾರದು? ನೀವು ಕರ್ಮ ಎಂದು ಕರೆಯುವ ನಿಗೂಢ ಪ್ರಕ್ರಿಯೆ ಇದಕ್ಕೆ ಕಾರಣವೆಂದು ಭಾವಿಸಿದ್ದೀರಾ? ನೀವು ಹಿಂದಿನ ಜನ್ಮದಲ್ಲಿ ಅನಾಮಧೇಯ ಕಡುಬಡವನಾಗಿದ್ದು ಈ ಜನ್ಮದಲ್ಲಿ ಆ ಕಷ್ಟಗಳಿಗೆ ಬಹುಮಾನವೆಂದು ಆಸ್ತಿ ಅಂತಸ್ತು ದೊರೆತಿವೆಯೇ? ಅಥವ ಹಿಂದಿನ ಯಾವುದೋ ಜನ್ಮದಲ್ಲಿ ಬಹಳ ಕೆಟ್ಟವರಾಗಿ ವರ್ತಿಸಿ ಈ ಜನ್ಮದಲ್ಲಿ ಬಡವರಾಗಿದ್ದು ಹಳೆಯ ಸಾಲ ತೀರಿಸುತ್ತಿದ್ದೀರಾ!

ನೋಡಿ, ಇದು ನಿಜವಾಗಲೂ ಬಹಳ ಜಟಿಲವಾದ ಸಮಸ್ಯೆ. ಬಡತನವೆಂಬುದು ಸಮಾಜದ ದೋಷ, ಸಮಾಜದ ತಪ್ಪು. ದುರಾಸೆಯುಳ್ಳವರು, ಕುತಂತ್ರಿಗಳು ಶೋಷಣೆ ಮಾಡುತ್ತಾ ಮೇಲೆ ಬರುವುದಕ್ಕೆ ಅವಕಾಶಮಾಡಿಕೊಡುವ ಸಮಾಜದ ದೋಷ. ನಮಗೂ ಅದೇ ಬೇಕು. ಅಂತಸ್ತಿನ ಏಣಿಯನ್ನು ಏರಿ ಮೇಲಕ್ಕೆ ಬರುವ ಆಸೆ ನಮಗೂ ಇದೆ. ಆಗ ಏನಾಗುತ್ತದೆ? ಬೇರೆಯವರನ್ನು ತುಳಿದು, ಅದುಮಿ, ಮೇಲೆ ಏರುತ್ತೇವೆ. ತುಳಿತಕ್ಕೆ ಒಳಗಾದವನು, ನಾಶಹೊಂದಿದವನು ನನ್ನ ಬದುಕು ಏಕೆ ಸಂಕಟದಿಂದ ತುಂಬಿದೆ? ನಿಮ್ಮ ಬಳಿ ಎಲ್ಲವೂ ಇದೆ, ನನ್ನಲ್ಲಿ ಯಾವ ಸಾಮರ್ಥ್ಯವೂ ಇಲ್ಲ, ನನ್ನ ಬಳಿ ಏನೂ ಇಲ್ಲ ಎನ್ನುತ್ತಾನೆ. ನಾವು ಯಶಸ್ಸಿನ ಏಣಿಯನ್ನು ಏರುತ್ತ ಹೋದಂತೆ

ನಮ್ಮಿಂದ ತುಳಿತಕ್ಕೆ ಗುರಿಯಾದ, ಅನ್ನ ಕಳೆದುಕೊಂಡ, ನರಳುವ, ರೋಗಿಷ್ಟ ಜನ ಸೃಷ್ಟಿಯಾಗುತ್ತಿರುತ್ತಾರೆ. ಯಾಕೆ ಕೆಲವರು ಬಡವರಾಗಿ, ಕೆಲವರು ಶ್ರೀಮಂತರಾಗಿದ್ದಾರೆ, ಯಾಕೆ ಕೆಲವು ಮಕ್ಕಳಿಗೆ ಪ್ರತಿಭೆ ಇದೆ, ಕೆಲವು ಮಕ್ಕಳಿಗೆ ಇಲ್ಲ ಎಂದು ತಿಳಿಯುವುದಕ್ಕಿಂತ ಯಶಸ್ಸಿನ ಆಸೆ, ಯಶಸ್ಸಿನ ಕಾಮನೆಯನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ಮೇಲೇರುವ ನಮ್ಮ ಆಸೆ, ಯಶಸ್ಸು ಪಡೆಯಬೇಕೆಂಬ ನಮ್ಮ ಹಂಬಲ, ಗೆಲ್ಲಬೇಕೆಂಬ ನಮ್ಮ ಹಟ ಇವನ್ನು ಬದಲಾಯಿಸಿಕೊಳ್ಳಬೇಕು. ನಮ್ಮೆಲ್ಲರಲ್ಲೂ ಗೆಲ್ಲುವ ಆಸೆ ಇದೆಯಲ್ಲವೇ? ದೋಷವಿರುವುದು ಆ ಆಸೆಯಲ್ಲಿ, ಆ ಕಾಮನೆಯಲ್ಲಿಯೇ ಹೊರತು ಕರ್ಮ ಅಥವ ಇನ್ನಾವುದೋ ಒಂದು ವಿವರಣೆ ಮುಖ್ಯವಲ್ಲ. ವಾಸ್ತವವೆಂದರೆ ನಾವೆಲ್ಲರೂ ಮೇಲೆ, ತುಟ್ಟತುದಿಯಲ್ಲಿ ಇರಬೇಕೆಂದು ಬಯಸುತ್ತೇವೆ. ಅಥವಾ ತುಟ್ಟತುದಿಯನ್ನು ತಲುಪಲಾಗದಿದ್ದರೂ ನಮಗೆ ಎಷ್ಟು ಸಾಧ್ಯವೋ ಅಷ್ಟು ಮೇಲೆ ಏರಲು ಬಯಸುತ್ತೇವೆ. ಎಲ್ಲಿಯವರೆಗೆ ನಮ್ಮಲ್ಲಿ ದೊಡ್ಡಮನುಷ್ಯರಾಗುವ ಆಸೆ ಇರುತ್ತದೆಯೋ, ಈ ಜಗತ್ತಿನಲ್ಲಿ ಮುಖ್ಯವ್ಯಕ್ತಿಗಳು, ಗಣ್ಯರು ಆಗಬೇಕೆಂಬ ಹಂಬಲ ಇರುತ್ತದೆಯೋ ಅಲ್ಲಿಯವರೆಗೆ ಬಡವ ಮತ್ತು ಶ್ರೀಮಂತ, ಶೋಷಕ ಮತ್ತು ಶೋಷಿತರು ಇರುತ್ತಾರೆ.

**ಪ್ರಶ್ನೆ:** ದೇವರು ಗಂಡೋ, ಹೆಣ್ಣೋ ಅಥವಾ ಸಂಪೂರ್ಣವಾಗಿ ನಿಗೂಢವೋ?

**ಕೃಷ್ಣಮೂರ್ತಿ:** ನಾನು ಈಗಾಗಲೇ ಈ ಪ್ರಶ್ನೆಗೆ ಉತ್ತರ ಹೇಳಿದ್ದೇನೆ. ಬಹುಶಃ ನೀವು ಅದನ್ನು ಕೇಳಿಸಿಕೊಂಡಿಲ್ಲವೆಂದು ತೋರುತ್ತದೆ. ಈ ದೇಶದಲ್ಲಿ ಗಂಡಸರದೇ ಪ್ರಾಬಲ್ಯ. ದೇವರು ಹೆಣ್ಣು ಎಂದು ಹೇಳಿದೆ ಎಂದಿಟ್ಟುಕೊಳ್ಳಿ. ನೀವೇನು ಮಾಡುತ್ತೀರಿ? ದೇವರು ಗಂಡಸು ಎಂಬ ಐಡಿಯಾ ನಿಮ್ಮಲ್ಲಿರುವುದರಿಂದ ನನ್ನ ಮಾತನ್ನು ತಿರಸ್ಕರಿಸುತ್ತೀರಿ. ಆದ್ದರಿಂದ ದೇವರು ಗಂಡೋ, ಹೆಣ್ಣೋ ಎಂಬುದನ್ನು ನೀವೇ ಕಂಡುಕೊಳ್ಳಬೇಕು. ಹಾಗೆ ಕಂಡುಕೊಳ್ಳುವುದಕ್ಕೆ ನಿಮ್ಮ ಮನಸ್ಸು ಯಾವುದೇ ಪೂರ್ವಾಗ್ರಹಗಳಿಲ್ಲದೆ ಮುಕ್ತವಾಗಿರಬೇಕು.

